Regd No. H/TRP 14 ಬಿಡಿಪ್ರತಿ ಬೆಲೆ 50 ಪೈಸೆ.

# ಶ್ರೀ [illegible] ದೇವಸ್ಥಾನ, ತಿರುಮಲೆ

## [illegible] ಕಾರ್ಯಕ್ರಮ, 28—2—1981 ವರೆಗೆ

### [illegible]

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು
ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ
ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ,
(ಏಕಾಂತ)
,, 1–00 ರಿಂದ 9–00 ವರೆಗೆ ಸರ್ವದರ್ಶನ
,, 1–00 ರಿಂದ 6–00 ವರೆಗೆ ಕಲ್ಯಾಣೋತ್ಸವ ಇತ್ಯಾದಿ
ರಾತ್ರಿ 9–00 ರಿಂದ 10–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು
ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ
ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ
(ಏಕಾಂತ), ತಿರುಪ್ಪಾವಡ, ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಮಧ್ಯಾಹ್ನ 1–00 ರಿಂದ 6–00 ವರೆಗೆ ಕಲ್ಯಾಣೋತ್ಸವ ಇತ್ಯಾದಿ
ರಾತ್ರಿ 6–00 ರಿಂದ 8–00 ವರೆಗೆ ಪೂಲಂಗಿಸೇವೆ, ಗಂಟೆ,
ಇತ್ಯಾದಿ
,, 8–00 ರಿಂದ 10–00 ವರೆಗೆ ಪೂಲಂಗಿ ಸರ್ವದದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ,
ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ
(ಆರ್ಜಿತ)
,, 8–00 ರಾತ್ರಿ 9–00 ವರೆಗೆ ಸರ್ವದರ್ಶನ
ಮಧ್ಯಾಹ್ನ 1–00 ರಿಂದ 6–00 ವರೆಗೆ ಕಲ್ಯಾಣೋತ್ಸವ ಇತ್ಯಾದಿ
ರಾತ್ರಿ 9–00 ರಿಂದ 10–00 ವರೆಗೆ ಶುದ್ಧಿ ಇತ್ಯಾದಿ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ
ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು
ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ 2ನೇ ಗಂಟೆ, ಬಲಿ,
ಶಾತ್ತುಮೊರೆ
,, 10–00 ರಿಂದ ರಾತ್ರಿ 9–00 ವರೆಗೆ ಸರ್ವದರ್ಶನ
ಮಧ್ಯಾಹ್ನ 1–00 ರಿಂದ 6–00 ವರೆಗೆ ಕಲ್ಯಾಣೋತ್ಸವ ಇತ್ಯಾದಿ
ರಾತ್ರಿ 9–00 ರಿಂದ 10–00 ವರೆಗೆ ಶುದ್ಧಿ ಇತ್ಯಾದಿ ರಾತ್ರಿ
ಕೈಂಕರ್ಯ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.
2. ಸುಪ್ರಭಾತದರ್ಶನಕ್ಕೆ ರೂ. 25/– ಟಿಕೆಟ್ಟುಳ್ಳವರೇ ಅನುಮತಿಸಲ್ಪಡುವರು.
3. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ಪ್ರತ್ಯೇಕ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.
4. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐವರಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.
5. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 6–00 ನಡುವೆ ಜರುಗುವವು.



ತಿರುಮಲೆಗೆ ಆಗಮಿಸಿದ ಭಾರತದ ರಾಷ್ಟ್ರಪತಿ ಡಾ|| ನೀಲಂ ಸಂಜೀವರೆಡ್ಡಿ ಅವರು ಮೊದಲಿಗೆ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸಿ ದೈವದ ಆಶೀರ್ವಾದ ಪಡೆದರು. ಮೇಲಿನ ಚಿತ್ರದಲ್ಲಿ ರಾಷ್ಟ್ರಪತಿಯವರು ಧ್ವಜಸ್ಥಂಬದ ಪೀಠದ ಕುಸುರಿಗೆಲಸವನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರೊಂದಗೆ ಪರಿಶೀಲಸುತ್ತಿರುವುದನ್ನು ಕಾಣಬಹುದು.

# ತಿರುಮಲೆಯಲ್ಲಿ ರಾಷ್ಟ್ರಪತಿ

ರಾಷ್ಟ್ರಪತಿಯವರನ್ನು ಸ್ವಾಗತಿಸುತ್ತಾ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಅಂಜಯ್ಯ, ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಮಂತ್ರಿಮಂಡಳದ ಶ್ರೀ ಪಿ. ವಿ. ಚೌದರಿ, ತಿ.ತಿ.ದೇ. ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಆಂಧ್ರ ಮುಜರಾಯಿ ಇಲಾಖಾ ಕಮೀಷನರ್ ಶ್ರೀ ಚಂದ್ರಮೌಳಿ ರೆಡ್ಡಿ.





ಏಳಯ್ಯ ಬೆಳಗಾಯಿತು

ಏಳು ನಾರಾಯಣ ಏಳು ಲಕ್ಷ್ಮೀರಮಣ ।
ಏಳು ಶ್ರೀ ಗಿರಿಯೊಡೆಯ ವೆಂಕಟೇಶ ॥ ಅ. ಪ ॥

ದಾಸರೆಲ್ಲರು ಬಂದು ಧೂಳಿ ದರ್ಶನಗೊಂಡು
ಲೇಸಾಗಿ ತಾಳದಂಡಿಗೆಯ ಪಿಡಿದು ॥
ಕೇಶವನೆ ನಿಮ್ಮ ಸಿರಿನಾಮವನೆ ಸ್ಮರಿಸುತಲಿ
ವಾಸುದೇವನೆ ಉದಯದಲಿ ಪಾಡುತಿಹರು ॥ ೧ ॥

ಕಾಸಿದ್ದ ಹಾಲುಗಳ ಕಾವಡಿಯ ತುಂಬಿಟ್ಟು
ಲೇಸಾಗಿ ಕೆನೆ ಮೊಸರು ಬೆಣ್ಣೆಯನೆ ಮೆದ್ದು ॥
ಶೇಷಶಯನನೆ ಏಳು ಸಮುದ್ರ ಮಥನವ ಮಾಡು ।
ದೇಶ ಕೆಂಪಾಯಿತೇಳಯ್ಯ ಹರಿಯೇ ॥ ೨ ॥

ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ ।
ಸುರರು ತಂದಿಹರಯ್ಯ ಸುಜನರೊಡೆಯ ॥
ಅರವಿಂದ ಲೋಚನನೆ ಕೋಳಿ ಕೂಗಿತು ಕೇಳು
ಪುರಂದರ ವಿಠಲನೆ ಬೆಳಗಾಯಿತು ॥ ೩ ॥

—ಶ್ರೀ ಪುರಂದರದಾಸರು

# ತಿ. ತಿ. ದೇವಸ್ಥಾನಗಳು, ತಿರುಪತಿ.



## ಒಂದು ಹಕ್ಕಿನೋಟ

1. ದೇವಸ್ಥಾನಗಳು 42

2. ಸ್ಥಳಾವಕಾಶ
   - ಅ) ಉಚಿತ ಕೊಠಡಿಗಳು 1102
   - ಆ) ಬಾಡಿಗೆ ಕೋಣೆಗಳು, ಮನೆಗಳು 812
   - ಇ) ಅತಿಥಿ ಗೃಹಗಳು 4

3. ಫಲಾಹಾರ ಮಂದಿರಗಳು 5

4. ಆಸ್ಪತ್ರೆಗಳು 7

5. ಶೈಕ್ಷಣಿಕ ಸಂಸ್ಥೆಗಳು
   - ಅ) ಸಂಸ್ಕೃತ ಹಾಗೂ ಧಾರ್ಮಿಕ 5
   - ಆ) ಕಲಾ, ವಿಜ್ಞಾನ ಕಾಲೇಜುಗಳು 5
   - ಇ) ಸಾಂಸ್ಕೃತಿಕ ಹಾಗೂ ತಾಂತ್ರಿಕ 4
   - ಈ) ಶಾಲೆಗಳು 8

6. ದತ್ತಿ ಸಂಸ್ಥೆಗಳು 2

7. ಉದ್ಯಾನವನ ಹಾಗೂ ಪುಷ್ಪವಾಟಿಕೆಗಳು 28 (312 ಎಕರೆ)

8. ಹಯನೋತ್ಪಾದನೆ
   - ಅ) ಜಾನುವಾರು ಸಂಖ್ಯೆ 439
   - ಆ) ಬೇಸಾಯದ ಭೂಮಿ ಎಕರೆ 150
   - ಬೀಡು ಭೂಮಿ " 110

9. ಕಾನನ ಪ್ರದೇಶ ಎಕರೆ 6610 (26.75, ಚ.ಕೀ.ಮೀ)

10. ತೀರ್ಥಗಳು 16

11. ಅಣೆಕಟ್ಟುಗಳು(ಪೂರ್ಣಗೊಂಡದ್ದು, ಕಾಮಗಾರಿಯಲ್ಲಿರುವುದು)2

12. ವಸ್ತು ಸಂಗ್ರಹಾಲಯಗಳು 2

13. ವಿಭಾಗಗಳು 58

14. ಕೆಲಸಗಾರರು (ಎಲ್ಲ ರೀತಿಯವರೂ ಸೇರಿ) 5392

15. ಮುದ್ರಣ ಶಾಲೆ 1

16. ಪ್ರಕಟನೆಗಳು
   - ಅ) ಮಾಸಪತ್ರಿಕೆ ಸಪ್ತಗಿರಿ (5 ಭಾಷೆಗಳಲ್ಲಿ)
   - ಆ) ವಾರ್ಷಿಕ ಪಂಚಾಂಗ
   - ಇ) 1979–80 ರಲ್ಲಿ ಧಾರ್ಮಿಕ ಹಾಗೂ ಎಚ್.ಡಿ.ಆರ್.ಎಸ್. ಪ್ರಕಟನೆಗಳು 65

17. ಹಿಂದೂಧರ್ಮರಕ್ಷಣ ಸಂಸ್ಥೆಯ ಶಾಖೆಗಳು 14

18. ವಿಚಾರಣಾ ಕೇಂದ್ರಗಳು 17

19. ಕಲ್ಯಾಣ ಮಂಟಪಗಳು 9

20. ಯಾತ್ರಿಕರ ಸಂಖ್ಯೆ
   - 1979–80 61, 10, 032
   - 1–4–80 ರಿಂದ 31–10–80 ವರೆಗೆ 45,16,955
   - 1980 ನವಂಬರ್ ತಿಂಗಳಿನಲ್ಲಿ 4,56,338

21. ಆದಾಯ (ಎಲ್ಲ ಬಾಬ್ತುಗಳಿಂದಲೂ ಸೇರಿ)
   - 1979–80 ರೂ 15, 78, 31, 137
   - 1–4–80 ರಿಂದ 31–10–80 ವರೆಗೆ ರೂ 12,06,30,660

22. 1980ರ ನವಂಬರ್ ತಿಂಗಳಿನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಯ ವಸೂಲಾತಿ ರೂ 97,93,152

TIRUMALA TIRUPATI DEVASTHANAMS

# ಸಪ್ತಗಿರಿ

ಕನ್ನಡ, ತೆಲುಗು, ತಮಿಳು, ಇಂಗ್ಲೀಷ್,
ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.



ಸಂಪುಟ 11] ಫೆಬ್ರವರಿ 1981 [ಸಂಚಿಕೆ 9

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್,
ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.
ಟೆಲಿಫೋನ್ ನಂಬರು; 2254

ಮುದ್ರಣ:
ಯಂ. ವಿಜಯಕುಮಾರ್‌ರೆಡ್ಡಿ
ಮೇನೇಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು; 2340

ಮಿಕ್ಕ ವಿವರಗಳಿಗೆ:
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

## ವಿಷಯಸೂಚಿ



ಮುಖಚಿತ್ರ : 'ಸೂರ್ಯ–ನಾರಾಯಣ' ಚಿತ್ರ : ಕೆ. ಜಗದೀಶ್

# ವಾರ್ತಾಲಹರಿ



ಶ್ರೀ ಪ್ರಭಾಕರ ಉಮಾಮಹೇಶ್ವರ ಪಂಡಿತರ ಸನ್ಮಾನ.
ಚಿತ್ರದಲ್ಲಿ ಅವರೊಂದಿಗೆ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್, ಶ್ರೀಶ್ರೀ ಚಿನ್ನ ನಾರಾಯಣ ಜೀಯರ್ ಅವರನ್ನು ಕಾಣಬಹುದು

## ಪಂಡಿತ ಸನ್ಮಾನ

ಹಿಂದೂ ಧರ್ಮ ಪ್ರಸಾರದಲ್ಲಿ ಕೃಷಿಮಾಡಿದ ಶ್ರೀ ಪ್ರಭಾಕರ ಉಮಾಮಹೇಶ್ವರ ಪಂಡಿತರನ್ನು ತಿ. ತಿ. ದೇ. ತನ್ನ ಅಸ್ಥಾನ ವಿದ್ವಾಂಸರನ್ನಾಗಿಸಿ ಅವರನ್ನು ಸನ್ಮಾನಿಸಿತು. ಹೈಂದವ ಸಮಾಜಕ್ಕೆ ಅಗತ್ಯ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡುತ್ತ ಬಂದಿರುವ ಜ್ಞಾನವೃದ್ಧರೂ ವಯೋವೃದ್ಧರೂ ಆದ ಪಂಡಿತರಿಗೆ ಶ್ರೀ ಶ್ರೀ ಪೇಜಾವರ ಸ್ವಾಮಿಗಳು ಬಂಗಾರದ ಪದಕವನ್ನು ನೀಡಿದರು. ಶ್ರೀ ನಾರಾಯಣಜೀಯರ್ ಅವರು ಜೋಡಿ ಶಾಲುವನ್ನು ಹೊದಿಸಿದರು. ಶ್ರೀ ಬ್ರಹ್ಮಚಾರಿ ಅವರು ಪುಷ್ಪಮಾಲಾರ್ಪಣೆ ಮಾಡಿದರು.

ಶ್ರೀಪಂಡಿತಕೃತ ಹಿಂದೂ ಧಾರ್ಮಿಕ ಪುಸ್ತಕಗಳ ಹಕ್ಕುಗಳನ್ನು ದೇವಸ್ಥಾನ ಪಡೆದು ಅವುಗಳನ್ನು ತಿ. ತಿ. ದೇ. ಗಳ ಮೂಲಕ ಪ್ರಸಾರ ಮಾಡಿ ಬಂದ ಹಣವನ್ನು ಹಿಂದೂ ಧರ್ಮ ಪ್ರಸಾರಕ್ಕೆ ಬಳಸಲಾಗುವುದೆಂದು ದೇವಸ್ಥಾನಗಳ ಪರವಾಗಿ ಅಧ್ಯಕ್ಷತೆ ವಹಿಸಿದ್ದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್.ಕೆ ಪ್ರಸಾದರು ನುಡಿದರು.

ಹಿಂದೂಧರ್ಮರಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಾ ॥ ಅರ್ಕಸೋಮಯಾಜಿ ಅವರು ಸ್ವಾಗತಿಸಿದ ಸಭೆಯನ್ನು ಶ್ರೀ ರಜನೀಕಾಂತರಾಯರು ವಂದಿಸಿದರು.

## ಧರ್ಮಪ್ರಸಾರಸಭೆ

ಹಿಂದೂ ಧರ್ಮಾಭಿವೃದ್ಧಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಜನವರಿ 11 ರಂದು ನಡೆದ ಸಭೆಯಲ್ಲಿ ನಾಲ್ಕು ರಾಜ್ಯಗಳ ಸುಮಾರು ಐವತ್ತು ಜನ ಪ್ರತಿನಿಧಿಗಳುಭಾಗವಹಿಸಿದ್ದರು.

ನಾಲ್ಕು ರಾಜ್ಯಗಳ ಧಾರ್ಮಿಕ ಪ್ರತಿನಿಧಿಗಳ ಸಭೆಯು ಎಲ್ಲ ಹಿಂದೂಗಳೂ ಅನುಸರಿಸಬೇಕಾದ ಸಾಮಾನ್ಯ ಧಾರ್ಮಿಕ ನೀತಿಯನ್ನು ರೂಪಿಸಬೇಕೆಂದೂ ತೀರ್ಮಾನಿಸಿತು.

ಪ್ರತಿನಿಧಿಗಳನ್ನು ಸ್ವಾಗತಿಸಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ತಿ.ತಿ.ದೇ.ಗಳ ಹಿಂದೂ ಧರ್ಮ ರಕ್ಷಣ ಸಂಸ್ಥೆಯು ಈ ಏಕ ಸಂಘಟನೆಯ ಮೂಲವಾಗಿ ಕೆಲಸ ಮಾಡುತ್ತದೆ ಎಂದೂ ತಿಳಿಸಿದರು.

ತಿರುಪತಿಯಲ್ಲಿ ಸೇರಿದ ನಾಲ್ಕು ದಕ್ಷಿಣ ರಾಜ್ಯಗಳ ಧಾರ್ಮಿಕ ಸಂಸ್ಥೆಗಳ ಪ್ರತಿನಿಧಿಗಳು ಹಿಂದೂ ಧರ್ಮ ಪ್ರಸಾರದಲ್ಲಿ ತೊಡಗಿರುವ ಎಲ್ಲ ಸಂಸ್ಥೆಗಳಲ್ಲೂ ಐಕ್ಯತೆಯನ್ನು ತರಬೇಕು ಎಂದು ತೀರ್ಮಾನಿಸಿದರು.

ಪೇಜಾವರ ಮಠದ ಶ್ರೀಶ್ರೀ ವಿಶ್ವೇಶ್ವರ ತೀರ್ಥ ಶ್ರೀಪಾದಂಗಳವರ ಅಧ್ಯಕ್ಷತೆಯಲ್ಲಿ ನಡೆದ ಈ ಸಭೆಯಲ್ಲಿ ಶ್ರೀಪಾದಂಗಳವರು ಹಿಂದೂ ಧರ್ಮವನ್ನು ಪ್ರಸಾರಮಾಡುವ ಸುತ್ತು ಅದರ ಪುನರ್ನಿರ್ಮಾಣದ ಅಗತ್ಯವನ್ನು ಕುರಿತು ಒತ್ತಿ ಹೇಳಿದರು.



ಧಾರ್ಮಿಕ ಪ್ರತಿನಿಧಿಗಳ ಸಭೆಯ ಒಂದು ನೋಟ.

# ದಾಸಶ್ರೇಷ್ಠ ಪುರಂದರದಾಸರು

ಕ್ರಿಸ್ತಶಕ ಹದಿನೈದನೆಯ ಶತಮಾನದಲ್ಲಿ ವಿಜಯನಗರ ಚಕ್ರಾಧಿಪತ್ಯದ ಉಛ್ರಾಯ ಕಾಲದಲ್ಲಿ, ಪುಣೆಯ ಹತ್ತಿರದ ಪುರಂದರಗಡ ವೆಂಬಲ್ಲಿ ಪ್ರಸಿದ್ಧವಾದ ಚಿನಿವಾರ ಮನೆತನ ದಲ್ಲಿ ವಶಿಷ್ಠಗೋತ್ರದ ಯಜುಶ್ಶಾಖೆಯ ವಿಪ್ರಕುಲದಲ್ಲಿ ಶ್ರೀಮಂತ ಶಿಶುವಾಗಿ ಜನಿಸಿದ ಪುರಂದರನಾಯಕರು (ಶ್ರೀನಿವಾಸ-ಕೃಷ್ಣಪ್ಪನಾಯಕ ಎಂದೂ ಹೇಳುವುದುಂಟು) ಅಗರ್ಭ ಶ್ರೀಮಂತಿಕೆಯನ್ನು ವಿಚಿತ್ರ ಸನ್ನಿವೇಶದಲ್ಲಿ ಸ್ವಯಂ ತಾವೇ ತ್ಯಜಿಸಿ, ವೈರಾಗ್ಯಮೂರ್ತಿಯಾಗಿ, ಹರಿದಾಸ ದೀಕ್ಷೆಯನ್ನು ವಹಿಸಿದ ಕತೆ ಪವಾಡಪೂರ್ಣ ವಾಗಿದೆ. ಎಷ್ಟೇ ಸರಳಗೊಳಿಸಿದರೂ ಪವಾಡ ಮರೆಯಾಗುವುದು ಅಸಾಧ್ಯವೂ ಆಗಿದೆ.

ಅಪಾರ ಐಶ್ವರ್ಯವನ್ನು ತ್ಯಾಗ ಮಾಡಿ–ಪಾತ್ರರಿಗೆ ದಾನಮಾಡಿ–ಕಾಲಿಗೆ ಗೆಜ್ಜೆಕಟ್ಟಿ ಗೋಪಾಳಬುಟ್ಟಿ ಜೋಳಿಗೆಗಳನ್ನು ಭುಜಕ್ಕೆ ತಗುಲಿಸಿ, ಕಂಠದಲ್ಲಿ ತುಳಸೀಮಾಲೆಯನ್ನು ಧರಿಸಿ, ತಲೆಗೆ ಶೇಷವಸ್ತ್ರ ಸುತ್ತಿ ಹರಿದಾಸ ವೇಷದಿಂದ, ಸಂತತ ಹರಿನಾಮಸ್ಮರಣೆ ಮಾಡುತ್ತ, ಮನಸ್ಸಿನಲ್ಲಿಯೂ ಅವನನ್ನೇ ಚಿಂತಿಸುತ್ತ, ಲಕ್ಷ ಲಕ್ಷ ಕೃತಿಗಳನ್ನು ಕನ್ನಡ ದಲ್ಲಿ ರಚಿಸಿ, ತಮ್ಮ ಬಾಳನ್ನು ಸಾರ್ಥಕ ಮಾಡಿಕೊಂಡುದೇ ಅಲ್ಲದೆ, ಸಮಾಜವನ್ನು ಉದ್ಧರಿಸಿ ಸುಧಾರಿಸಿ ಸುಜೀವಿಗಳಿಗೆ ಮೋಕ್ಷ ದಾಯಕ ನಾರಾಯಣ ಬೀಜಗಳನ್ನು ಹಂಚಿದ ಪುಣ್ಯಪುರುಷರಿವರು – ಪುರಂದರ ದಾಸರೆಂದೇ ಪ್ರಸಿದ್ಧರು.

ತಂದೆಯ ಕಾಲದಲ್ಲಿ ತಮ್ಮ ಬಾಲ್ಯದಲ್ಲಿ ಉದಾರಿಯೇ ಆಗಿದ್ದರೂ, ತಂದೆಯು ತರುವಾಯ, ತಾವೇ ಮನೆಗೆ ಯಜಮಾನರಾಗಿ ಗಲ್ಲಪೆಟ್ಟಿಗೆಯ ಗದ್ದುಗೆಯನ್ನೇರಿ ಕುಳಿತಾಗ ಲೋಭ ತಲೆಯಿಕ್ಕಿತು.

**ಡಾ॥ ಕೆ. ಎಂ. ಕೃಷ್ಣರಾವ್**

ಅದು ತುಂಬ ತೀವ್ರವಾಗಿ, ಆ ಕಾರಣ ದಿಂದಲೇ ಅವರ ಉದ್ಧಾರವೂ ಆಯಿತು !

ನಾರಾಯಣ ನಾಮವೆಂಬ ಬೀಜವನ್ನು ಭೂಮಿಯಲ್ಲಿ ಬಿತ್ತಲು ಬಂದ ದೇವಮುನಿ ನಾರದರೇ ಒರೆಗಲ್ಲಿಗೆ ಚಿನ್ನವನ್ನು ತಿಕ್ಕುತ್ತಾ, ತಕ್ಕಡಿ ಹಿಡಿದು ತೂಗುತ್ತಾ, ಕಾಸಿಗೆ ಕಾಸು ಗಂಟು ಹಾಕುತ್ತಾ, ಕಬ್ಬಿಣದ ಪೆಟ್ಟಿಗೆ ಯನ್ನು ತುಂಬುತ್ತಾ ಕುಳಿತುದನ್ನು ಕಂಡು ನಕ್ಕ ನಾರಾಯಣ – ಅಜ್ಞಾನ ಪರಿಹಾರಕ ರೂಪೀವಿಠಲ, ಇವರಲ್ಲಿ ಪ್ರಾರಬ್ಧವಶದಿಂದ ಬಂದು ಸುತ್ತಿಕೊಂಡಿದ್ದ ಕಾರ್ಪಣ್ಯವೆಂಬ ದೌರ್ಬಲ್ಯವನ್ನು ನೆವಮಾಡಿ, ಅವರ ಜೀವನ ದಲ್ಲಿ ಒಂದು ತಿರುವನ್ನು ತಂದು, ಲೋಕಕ್ಕೆ ಆಭರಣಗಳನ್ನು ನೀಡುತ್ತಿದ್ದ ನಾಯಕರನ್ನೇ ಒಂದು ದಿವ್ಯಾಭರಣವನ್ನಾಗಿ ಮಾಡಿದ – ಈ ನಾಟಕದಲ್ಲಿ ಅವರ ಹೆಂಡತಿಗೇ ಪ್ರಮುಖ ಪಾತ್ರವನ್ನೂ ಕೊಟ್ಟ ಕತೆ ಸ್ವಾರಸ್ಯ ವಾದುದು.

ವೇಷಾಂತರದಿಂದ ವಿಠಲನೇ ಬ್ರಹ್ಮನ ಸಮೇತ ಆರುತಿಂಗಳು ನಾಯಕರ ಅಂಗಡಿಯ ಬಾಗಿಲಿಗೆ ಎಡತಾಕಿದನಂತೆ. ವೇಷಧಾರಿ ವಿಠಲನನ್ನು ಶ್ರೀಮಂತ ನಾಯಕರು ಗುರುತಿಸುವುದು ಸಾಧ್ಯವೇ?– ಕಿಟ್ಟಗಟ್ಟಿದ ಲೋಹ ವಾಗಿದ್ದುದರಿಂದ. ಇದನ್ನು ತೊಳೆಯುವ ಕೆಲಸವನ್ನು ವಿಠಲ ಹೆಂಡತಿಯ ಮೂಲಕ ಮಾಡಿದ. ನಾಯಕರು ಧಾರಾಳವಾಗಿ ನೀಡಿದ ಸವಕಲು ನಾಣ್ಯವನ್ನೊಲ್ಲದೆ, ಯಾಚಕ ಅವರ ಮನೆಗೆ ಹೋಗಿ ನಾಯಕನ ಪತ್ನಿಯನ್ನು ಬೇಡಿ ಅನರ್ಘ್ಯ ಮೂಗುತಿಯನ್ನೇ ದಾನ ವಾಗಿ ಪಡೆದು, ನಾಯಕರ ಹತ್ತಿರವೇ



ಮಾರಾಟಕ್ಕೆ ತಂದು 'ನಾಲ್ಕುನೂರು ಪಾಕಿ ತಾ' ಎಂದ !

ಮೂಗುತಿ ತಮ್ಮಾಕೆಯದೇ ಎಂದು ಕೂಡಲೇ ಗುರುತು ಹಿಡಿದ ನಾಯಕನನ್ನು ನೋಡಿ ನಕ್ಕ ವಿಠಲ. ಈ ಎರಡನೆಯ ನಗು ನಾಯಕನನ್ನು ಪಕ್ವದೆಸೆಯ ಅಂಚಿನಲ್ಲಿ ತಂದಿತು.

ಮೂಗುತಿಯನ್ನು ತಂದು ತೋರು ಎಂದು ಹೆಂಡತಿಯನ್ನು ದಂಡಿಸಹೊರಟ ನಾಯಕನಿಗೆ. ಪತ್ನಿ ಅಸುನೀಗಲು ಸಿದ್ಧ ಪಡಿಸಿದ ವಿಷದ ಬಟ್ಟಲಲ್ಲಿ ಟೊಕ್ಕೆಂದು ಬಂದು ಬಿದ್ದ ಮೂಗುತಿಯ ಕಥೆ ಕೇಳಿ ತಲೆ ದಿಮ್ಮೆಂದು ಸುತ್ತಿತು.

ಯಾಚಕ ವಿಪ್ರ ಅವನ ಮುಂಜಿಗೆ ಬಂದ ಬಾಲಕರಿಬ್ಬರೂ ನಾಪತ್ತೆ ! ನಾಯಕನ

ಪುರಂದರದಾಸರ ಹೆಸರು ಕರ್ನಾಟಕ ಸಂಗೀತದಲ್ಲಿ, ಕನ್ನಡ ಸಾಹಿತ್ಯದಲ್ಲಿ ಕರ್ನಾಟಕ ಸಮಾಜದಲ್ಲಿ, ಇತಿಹಾಸದಲ್ಲಿ, ಸುಪರಿಚಿತ. ಹಳ್ಳಿಯ ಹೆಂಗಸರೂ ಮಕ್ಕಳನ್ನಾಡಿಸುವಾಗ, ಜೋಗುಳಹಾಡಿ ಮಕ್ಕಳನ್ನು ಮಲಗಿಸುವಾಗ ತಮಗರಿವಿಲ್ಲದಂತೆ ಪುರಂದರದಾಸರ ಪದಗಳನ್ನು ಹಾಡುವುದು ಕನ್ನಡ ನಾಡಿನುದ್ದಗಲಕ್ಕೆ ದಿನನಿತ್ಯವೂ ನೋಡಬಹುದಾದ ಅಂಶ. ಹಾಗೆ ಜನ ಜೀವನದಲ್ಲಿ ಹಾಸು ಹೊಕ್ಕಾಗಿ ಸೇರಿದ ದಾಸರ ಜಯಂತಿ ಫೆಬ್ರುವರಿ ತಿಂಗಳಿನಲ್ಲಿ. ಆ ಸಂಸ್ಮರಣೆ ಯಲ್ಲಿ ಈ ಲೇಖನ.

—ಸಂ॥

ಹೃದಯ ಮಂದಿರವನ್ನು ತೆಗೆದು ಹೊರಟು ಹೋಗಿದ್ದ ವಿಠಲ !

ನಾಯಕರ ಹೃದಯ ಹಿಂಡಿದಂತಾಯಿತು. ತನಗಿಂತ ಹೆಂಡತಿ ಭಾಗ್ಯವಂತಳು ಎಂಬ ಭಾವ ಮೂಡಿ ಪಶ್ಚಾತ್ತಾಪ ಪಟ್ಟ ಪರಿಣಾಮವಾಗಿ ಸ್ವಪ್ನ ಸೂಚನೆಯಾದ ಪ್ರಕಾರ ಜಡ ಐಶ್ವರ್ಯವನ್ನೆಲ್ಲಾ ಸತ್ಪಾತ್ರದಲ್ಲಿ ದಾನಮಾಡಿ, ವೈರಾಗ್ಯ ಭಾಗ್ಯ ಹೊಂದಿ, ವಿಜಯನಗರದ ರಾಜಗುರು ಶ್ರೀ ವ್ಯಾಸರಾಜರ ಸಂದರ್ಶನ ಪಡೆದು ಅವರಿಂದ ಅಂಕಿತ ದಾಸದೀಕ್ಷೆಗಳನ್ನು ಹೊಂದಿ, ಅವರ ಉಪದೇಶಾಮೃತದಿಂದ ಪುನೀತರಾಗಿ ತಮ್ಮ ಉಳಿದ ಜೀವನವನ್ನು ನಾಡ, ನುಡಿಯ. ಹರಿಯ, ಸೇವೆಗೆ ಮೀಸಲಾಗಿಟ್ಟರು.

ಸರಳ ಜೀವನ – ಉನ್ನತ ಚಿಂತನ ಎಂಬ ಭಾರತೀಯ ಆದರ್ಶವನ್ನು ಕಾರ್ಯರಂಗದಲ್ಲಿ ತಂದು ಲಕ್ಷಾಂತರ ಕೃತಿಗಳನ್ನು ರಚಿಸಿ ಸಂಗೀತ – ಸಾಹಿತ್ಯ – ಸಿದ್ಧಾಂತ – ಸಮಾಜ ಸುಧಾರಣಾವಲಯಗಳಲ್ಲಿ ಅಮೂಲ್ಯ ಸೇವೆಯನ್ನು ಸಲ್ಲಿಸಿ ಶ್ರೀಶನನ್ನು ಒಲಿಸಿ ಪುರಂದರ ವಿಠಲ ಎಂಬ ಅಂಕಿತದಿಂದ ಪುರಂದರದಾಸರೆಂದೇ ಪ್ರಸಿದ್ಧರಾದರು.

ಪುರಂದರವಿಠಲ ಮುದ್ರಿಕೆಯಿಂದ ಪಾವನವಾದ ಅವರ ನುಡಿನಾಣ್ಯಗಳು ಇಂದು ಕನ್ನಡ ನುಡಿ ಭಂಡಾರದ ಆಣಿಮುತ್ತುಗಳಾಗಿವೆ.

ಈಸಬೇಕು ಇದ್ದು ಜೈಸಬೇಕು ; ಮಾನವ ಜನ್ಮ ದೊಡ್ಡದು ; ಉದರ ವೈರಾಗ್ಯ ; ಆಚಾರವಿಲ್ಲದ ನಾಲಿಗೆ ; ಧರ್ಮಕ್ಕೆ ಕೈ ಬಾರದೀ ಕಾಲ, ಚರ್ಮವ ತೊಳೆದರೆ ಕರ್ಮವು ಪೋಪುದೆ ; ಆದದ್ದೆಲ್ಲಾ ಒಳಿತೇ ಆಯಿತು. ಎಲ್ಲಾ ಲೊಳಲೊಟ್ಟೆ ; ರೊಕ್ಕ ಎರಡಕ್ಕು ದುಃಖಕಾಣಕ್ಕ, ಇವು ಕೆಲವು ಉದಾಹರಣೆಗಳು ಮಾತ್ರ.

ಪುರಂದರದಾಸರ ಮಹಾ ವ್ಯಕ್ತಿತ್ವವನ್ನು ಅನೇಕ ದೃಷ್ಟಿಕೋನಗಳಿಂದ ನಿರೂಪಿಸಬಹುದಾದರೂ, ಪ್ರಮುಖವಾಗಿ ಅವರು ಆದರ್ಶ ಭಗವದ್ಭಕ್ತರು - ಜೀವನ್ಮುಕ್ತರು. ತಮ್ಮ ಆತ್ಮೋದ್ಧಾರದೊಂದಿಗೇ ಇತರ ಅನೇಕ ಜೀವರ ಆತ್ಮೋದ್ಧಾರಕ್ಕೂ ಕಾರಣರಾದ ಲೋಕೋಪಕಾರಿ ಮತ್ತು ಕರುಣಾಳು.

ಆದರ್ಶ ಭಕ್ತಿ ಎಂದಾಗ ಅದರಲ್ಲಿ ಜ್ಞಾನ ಸೇರಲೇ ಬೇಕು. ವೇದಗಳು, ಉಪನಿಷತ್ತುಗಳು, ಭಾರತ, ಭಾಗವತ, ರಾಮಾಯಣ ಮತ್ತಿತರ ಅಂತಹ ಗ್ರಂಥಗಳ ಜ್ಞಾನ ಭಂಡಾರವೇ ಆಗಿದ್ದರು ಪುರಂದರದಾಸರು ಎಂಬುದು ಅವರ ಕೃತಿಗಳಿಂದಲೇ ಸುಸ್ಪಷ್ಟವಾಗುವುದು.

ಸಂಗೀತ ಸಾಹಿತ್ಯ ವಲಯಗಳಲ್ಲಿಯೂ ಅವರು ಪ್ರಮುಖ ವ್ಯಕ್ತಿಯಾದರು. ತಮ್ಮ ಕೃತಿಗಳನ್ನು ಛಂದೋಬದ್ಧವಾಗಿ ರಾಗ ತಾಳ ಲಯ ಗೇಯ ಯುಕ್ತವಾಗಿ ರಚಿಸಿದುದರಿಂದ ಸಂಗೀತ ಪ್ರವೇಶವಾಯಿತು. ಹೃದಯಪೂರ್ವಕವಾದ ಅನುಭವ ಸಂಪತ್ತಿನೊಂದಿಗೆ ಸಮಾಜವನ್ನು ಸೂಕ್ಷ್ಮದೃಷ್ಟಿಯಿಂದ ನೋಡಿ, ಸನ್ನಿವೇಶಗಳಿಂದ ಸ್ಫೂರ್ತಿಯ ಚಿಲುಮೆಚಿಮ್ಮಿ ಕೃತಿಗಳು ಹೊರಹೊಮ್ಮಿರುವುದರಿಂದ ಸಾಹಿತ್ಯಮಯವೂ ಆಯಿತು ಅವರ ಕೃತಿಗಳು. ಇಷ್ಟಲ್ಲದೆ ಅವರ ಕೃತಿಗಳು ತತ್ತ್ವನಿಬಿಡವಾಗಿಯೂ ಇರುವುದರಿಂದ ಸಿದ್ಧಾಂತ ವಲಯದಲ್ಲಿಯೂ ಅವರ ಹೆಸರು ಪ್ರಸಿದ್ಧವಾಯಿತು. ಅನುಷ್ಠೇಯ ತತ್ತ್ವಗಳನ್ನು ಆಯ್ದು ಸುಲಭಶೈಲಿಯಲ್ಲಿ ಹೇಳಿರುವುದರಿಂದ ಸಮಾಜಸುಧಾರಕರು, ತತ್ತ್ವೋಪದೇಶಕರೂ ಅವರಾದರು.

ಸಂಗೀತವಲಯದಲ್ಲಿ ಅವರಸೇವೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅದು ಚಿರಸ್ಮರಣೀಯ ಹಂತವನ್ನು ಏರಿತು. ಅವರ ಕಾಲದಲ್ಲಿ ಖರಹರಪ್ರಿಯ ರಾಗದಿಂದ ಸಂಗೀತ ಪಾಠವನ್ನು ಪ್ರಾರಂಭಿಸುವ ಪದ್ಧತಿ ನಡೆದುಬಂದಿತ್ತು. ಷಡ್ಜ ಪಂಚಮ ಮಧ್ಯಮಗಳ ಮಧ್ಯೆ ಚತುಃಶ್ರುತಿಯನ್ನು ಹಿಡಿಯುವುದು ಪ್ರಾರಂಭ ದೆಶೆಯ ಪ್ರಾಥಮಿಕ ಸಂಗೀತಾಭ್ಯಾಸಿಗಳಿಗೆ ತುಂಬ ಕಷ್ಟ ಎಂಬುದನ್ನು ಮನಗಂಡ ಪುರಂದರದಾಸರು ಈ ವಿಚಾರದಲ್ಲಿ ಸಂಶೋಧನ ಮಾಡಿ ದ್ವಿಶ್ರುತಿಯ ನಿಲುಗಡೆಯಲ್ಲಿ ಸಮಾನಾಂತರವಿಟ್ಟು ಅಭ್ಯಾಸಿಗಳಿಗೆ ಸರಳವಾಗುವಂತೆ ಮಾಯಾಮಾಳವಗೌಳ ರಾಗ ವರ್ಷಕ್ಕೆ ಸೇರಿದ ಮಲಹರಿ ರಾಗದಲ್ಲಿ ಪಾಠ ಪ್ರಾರಂಭ ಮಾಡಲು ಅನುಕೂಲವಾಗುವಂತೆ ತಾವೇ ಹಲವು ಕೃತಿಗಳನ್ನು ರಚಿಸಿ ಹೊಸ ಪಾಠ ಪದ್ಧತಿಯನ್ನು ಹಾಕಿ ಕೊಟ್ಟರು. ಸರಳ, ವರಸೆ,

ಜಂಟೀವರಸೆ, ತಾಳಾಲಂಕಾರ ಗೀತೆಗಳನ್ನು ರಚಿಸಿ ಕೊಟ್ಟರು. ಅವರು ರಚಿಸಿದ

'ಲಂಬೋದರ ಲಕುಮಿ ಕರ |
ಅಂಬಾಸುತ ಅಮರವಿನುತ'
'ಕೆರೆಯ ನೀರನು ಕೆರೆಗೆಚೆಲ್ಲಿ ವರವ
ಪಡೆದವರಂತೆ ಕಾಣಿರೊ'
'ಕುಂದಗೌರ ಗೌರೀವರ ||
'ಪದುಮ ನಾಭ ಪರಮಪುರುಷ'

ಇವು ಪಿಳ್ಳಾರಿಗೀತೆಗಳೆಂದು ಪ್ರಸಿದ್ಧವಾಗಿವೆ.

ಪುರಂದರದಾಸರು ತಾಳದಲ್ಲಿ ಒಂದು ವ್ಯವಸ್ಥೆಯನ್ನು ತಂದರು. ಏಳು ತಾಳ ಐದು ಜಾತಿಗಳನ್ನು ಸುಳಾದಿಗಳಲ್ಲಿ ತೋರಿಸಿದರು. ಹದಿನಾಲ್ಕುಸಾವಿರ ಸುಳಾದಿಗಳನ್ನು ರಚಿಸಿದರು.

ಎಟ್ಟೆಯಾಪುರಂ ಸುಬ್ಬರಾಮ ದೀಕ್ಷಿತರ "ಸಂಗೀತ ಸಂಪ್ರದಾಯದರ್ಶಿನಿ" ಯಲ್ಲಿ ಇವರ ಸುಳಾದಿಗಳನ್ನು ಸ್ವರ ಪ್ರಸ್ತಾರದೊಂದಿಗೆ ಉದ್ಧರಿಸಲಾಗಿದೆ.

ತುಳಜಾಜಿ ತನ್ನ "ಸಂಗೀತ ಸಾರಾಮೃತ"ದಲ್ಲಿ ಈ ವಿಚಾರವನ್ನು ಉಲ್ಲೇಖಿಸಿದ್ದಾನೆ. ಹೀಗೆ ಕರ್ಣಾಟಕ ಸಂಗೀತ (ದಕ್ಷಿಣಾದಿ ಸಂಗೀತ) ಪದ್ಧತಿ ಪುರಂದರ ದಾಸರಿಂದ ಇತೋಪ್ಯತಿಶಯವಾಗಿ ಬೆಳೆಯಲು ಅನುವಾಯಿತು.

ಖಿಲವಾಗುತ್ತಿದ್ದ ಸಂಗೀತ ಕಲೆಯನ್ನು ಪುನರುಜ್ಜೀವನಗೊಳಿಸಿದ ಕಾರಣ ಇವರನ್ನು ಕರ್ಣಾಟಕ ಸಂಗೀತ ಪಿತಾಮಹ ಎಂದು ಕರೆಯುವುದು ರೂಢಿಗೆ ಬಂದಿದೆ.

ಪುರಂದರದಾಸರ ಪ್ರಯೋಗಶೀಲಬುದ್ಧಿ ಕಲ್ಪನಾಶಕ್ತಿ ಮತ್ತು ವಿದ್ವತ್ತು ಅವರ ಈ ಸಾಧನೆಯಿಂದ ಚೆನ್ನಾಗಿ ತಿಳಿಯುತ್ತದೆ. ಹೀಗೆ ನಾದೋಪಾಸನದಿಂದಲೂ ಭಗವಂತನನ್ನು ಒಲಿಸಿಕೊಂಡವರು ಪುರಂದರದಾಸರು.

ಆಧ್ಯಾತ್ಮಿಕ ಜ್ಞಾನ ಭಕ್ತಿಗಳಿಲ್ಲದ ಸಂಗೀತ ಯಾವ ಪ್ರಯೋಜನಕ್ಕೂ ಬಾರದು ಎಂದು ಒಂದು ಕೃತಿಯನ್ನೇ ಅವರು ರಚಿಸಿದ್ದಾರೆ.

ಕೇಳನೋ ಹರಿ ತಾಳನೋ
ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ
........................
ನಾನಾ ಬಗೆಯ ರಾಗ ಭಾವ ತಿಳಿದು
ಸ್ವರ
ಜ್ಞಾನ ಮನೋಧರ್ಮ ಜಾತಿಯಿದ್ದು
ದಾನವಾರಿಯ ದಿವ್ಯ ನಾಮರಹಿತವಾದ
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು||
ಅಡಿಗಡಿಗಾನಂದ ಬಾಷ್ಪ ಪುಳಕದಿಂದ
ನಡೆನುಡಿಗೆ ಶ್ರೀಹರಿಯೆನ್ನುತ
ದೃಢಭಕ್ತರನು ಕೂಡಿ ಹರಿಕೀರ್ತನೆ
ಪಾಡಿ
ಕಡೆಗೆ ಪುರಂದರ ವಿಠಲನೆಂದರೆ ಕೇಳ್ವ!

ಹಿತಮಿತವಾದ ಸಂಗೀತ ಸಾಹಿತ್ಯಗಳ ಮಿಲನದಿಂದಾಗಿ ಮನಸ್ಸಿಗೆ ಆನಂದ, ಬುದ್ಧಿಗೆ ಆಹಾರ ಎರಡನ್ನೂ ತಂದಿತು, ಚಿತ್ತರಂಜನೆ ಹೃದಯೋಲ್ಲಾಸಗಳನ್ನು ನೀಡಿ ಜ್ಞಾನೋದಯವನ್ನುಂಟು ಮಾಡುತ್ತವೆ ಪುರಂದರದಾಸರ ದಿವ್ಯ ಕೃತಿಗಳು.

ಸಂಗೀತ ಹೇಗಿರಬೇಕು ಎಂಬುದನ್ನು ಪುರಂದರದಾಸರು ತುಂಬ ಚೆನ್ನಾಗಿ ವಿವರಿಸಿದ್ದಾರೆ—

ತಾಳಬೇಕು ತಕ್ಕ ಮೇಳ ಬೇಕು
ಶಾಂತವೇಳೆ ಬೇಕು ಗಾನವನ್ನು ಕೇಳ
ಬೇಕೆಂಬುವರಿಗೆ
ಯತಿಪ್ರಾಸವಿರಬೇಕು ಗತಿಗೆ ನಿಲ್ಲಿಸ
ಬೇಕು
ರತಿಪತಿ ಪಿತನಲ್ಲಿ ಅತಿಪ್ರೇಮವಿರಬೇಕು
ಗಳ ಶುದ್ಧಿಯಿರಬೇಕು ತಿಳಿದು ಪೇಳಲಿ
ಬೇಕು
ಕಳವಳ ಬಿಡಬೇಕು ಕಳೆಮುಖವಿರ
ಬೇಕು
ಅರಿತವರಿರಬೇಕು ಹರುಷ ಹೆಚ್ಚಲಿ
ಬೇಕು
ಪುರಂದರ ವಿಠಲನ ಪರದೈವವೆ—ಬೇಕು!

ಪುರಂದರದಾಸರ ಸಂಗೀತಪ್ರೇಮ, ಹರಿದಾಸ ಮಹಿಮೆ ಈ ಕೆಳಗಿನ ಉಗಾಭೋಗದಿಂದ ಸುಸ್ಪಷ್ಟವಾಗುತ್ತದೆ.

ತಂಬೂರಿ ಮೀಟಿದವ ಭವಾಬ್ಧಿ ದಾಟಿದವ
ತಾಳವ ಕಟ್ಟಿದವ ಸುರರೊಳು ಸೇರಿದವ
ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ
ಗಾಯನವ ಪಾಡಿದವ ಹರಿ ಮೂರ್ತಿ
ನೋಡಿದ್ದವ
ಪುರಂದರ ವಿಠಲ ನೋಡಿದವ ವೈಕುಂಠ
ಕೋಡಿದವ"

ಪುರಂದರದಾಸರು ರಚಿಸಿದ ಹಾಡುಗಳ ಸಂಖ್ಯೆ ಯಾರನ್ನಾದರೂ ಬೆರಗುಗೊಳಿಸುವಂತಹುದು. ಅವರೇ ಆ ಸಂಖ್ಯೆಯನ್ನು ಹೇಳಿರದಿದ್ದರೆ, ಯಾರೂ ಅದನ್ನು ನಂಬುತ್ತಲೂ ಇರಲಿಲ್ಲ.

ಇಂತು ನಾಲ್ಕು ಲಕ್ಷ ಇಪ್ಪತ್ತೈದು
ಸಾವಿರ ಕೃತಿಯು
ಕಂತುಜನಕನ ನಾಮ ಘನಮಹಿಮೆಯ
ಸಂತಸದಿ ಶ್ರುತಿಸ್ಮೃತಿ ಸಮ್ಮತಿ
ಪ್ರಮಾಣದಲಿ ಶ್ರೀ
ಮಂತ ಪುರಂದರ ವಿಠಲ ವ್ಯಾಸಮುನಿಗೆ
ಪೇಳಿಸಿದ

ಎಂದಿದ್ದಾರೆ. ಆದರೆ ನಮ್ಮ ದೌರ್ಭಾಗ್ಯದಿಂದ ಎರಡು ಸಾವಿರ ಕೃತಿಗಳು ಸಹ ನಮಗೆ ದೊರಕಿಲ್ಲ!!

ಸಾಕ್ಷಾತ್ ಗುರುಗಳಾದ ಶ್ರೀ ವ್ಯಾಸರಾಜರೇ ಪುರಂದರದಾಸರ ಹಿರಿಮೆಯನ್ನು ಹಾಡಿ ಹೊಗಳಿದ್ದಾರೆ.

"ದಾಸರೆಂದರೆ ಪುರಂದರದಾಸರಯ್ಯಾ" ಎಂದು

ಯಾಯವಾರವ ಮಾಡಿ ವಿಪ್ರರಿಗೆ ಮೃಷ್ಟಾನ್ನ ಊಣ ಬಡಿಸುತ್ತಿದ್ದರು. ಮಾಯಾ ಸಂಸಾರದಲ್ಲಿ ಮಮತೆಯನ್ನು ಬಿಟ್ಟಿದ್ದರು. ಸದಾನಾರಾಯಣ ಸ್ಮರಣೆಯಲ್ಲಿ ನಿರತರು. ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ ಮಾತು ಮಾತಿಗೆ ಬಿಡದೆ ವರ್ಣಿಸುತ್ತ ಗೀತನರ್ತದಿಂದ ಶ್ರೀಕೃಷ್ಣನನ್ನು ಪೂಜಿಸುವ ಪೂತಾತ್ಮರು ಪುರಂದರದಾಸರು ಎಂದು.

ಪುರಂದರ ಸೂಕ್ತಿಗಳು ಲೋಕಸಾರಕವಾಗಿದ್ದು ಅವುಗಳಲ್ಲಿ ಕವಿಹೃದಯ, ನಿರಾಳತೆ, ಮೋಹಪರಿಜಯ, ಪಕ್ವಾನುಭವಸಂಪತ್ತುಗಳು ಭಕ್ತಿಯ ಪಾಕದಲ್ಲಿ ಮಿಂದು ಆಧ್ಯಾತ್ಮಿಕ ಕಳೆಯಿಂದ ಕಂಗೊಳಿಸುತ್ತವೆ. ಸರಳಸುಂದರ ವಾಣಿಯೆಂಬ ಸಾಹಿತ್ಯ ಕ್ಷೀರಕ್ಕೆ ಸಂಗೀತ ಸಕ್ಕರೆಯನ್ನು ಹಿತವಾಗುವಷ್ಟು ಬೆರಸಿ ಹಾಡಿದರು. ಸಂಕೀರ್ತನ ಸಾಹಿತ್ಯ ಪದ್ಧತಿಗೆ ಪುರಂದರದಾಸರು ಆಚಾರ್ಯ ಪುರುಷರು.

ಕನ್ನಡ ಭಾಷೆ ಪರಿಪುಷ್ಟವಾಗಿ ಸಂಗೀತ ಭಾಷೆಯಾಗಿ ಬೆಳೆದುದು ಪುರಂದರದಾಸರಿಂದ ಎನ್ನಬಹುದು.

ಪುರಂದರ ಸಾಹಿತ್ಯವನ್ನು ಪುರಂದರೋಪನಿಷತ್ ಎಂದೂ ಕರೆಯಲಾಗಿದೆ. ಅದರಲ್ಲಿ ಲೋಕರೀತಿ ನೀತಿ ತತ್ತ್ವ ಹರಿಮಹಿಮೆ—ಕರುಣೆ, ಹರಿಶರಣತೆ ಅವುಗಳ ಸತ್ಫಲ, ಲೋಕ ವಿಡಂಬನೆ, ಹಾಸ್ಯದ ಚಟಾಕಿ, ಒಗಟಿನ ಪಟಾಕಿಗಳು ತುಂಬಿಕೊಂಡಿವೆ.

ಸಂಗೀತಾತ್ಮಕ ಸಾಹಿತ್ಯದ ಒರತೆಯಾಗಿ ಅದರಿಂದ ಚಿಮ್ಮಿದ ಚಿಲುಮೆ ಕನ್ನಡನಾಡಿನಲ್ಲಿ—ಹೊರಗೂ ಕೂಡ ಅಂದಿನಿಂದ ಇಂದಿನವರೆಗೆ ನಾಲ್ಕು ಶತಮಾನಗಳಿಗೂ ಹೆಚ್ಚಾದ ದೀರ್ಘ ಕಾಲದಲ್ಲಿ ನಿರಂತರ ಸ್ರೋತವಾಗಿ ಜೀವಝರಿಯಾಗಿ ಬತ್ತದತೊರೆಯಾಗಿ ಹರಿದು ಬರುತ್ತಿದೆ.

ಮಾನವರ ಜೀವನಾಡಿಯನ್ನು ಮಿಡಿದು ಹೃದಯವನ್ನು ಶುದ್ಧಿಗೊಳಿಸಿ, ಶೀಲವನ್ನು ನೇರ್ಪಡಿಸಿ, ನಡೆನುಡಿಯಲ್ಲಿ ವಿವೇಚನಾಶಕ್ತಿ ಉಕ್ಕುವಂತೆ ಮಾಡುವ ಚಿಕಿತ್ಸಕ ಗುಣ ಆ ಸಾಹಿತ್ಯದಲ್ಲಿ ಯಥೇಚ್ಛವಾಗಿದೆ. ತತ್ತ್ವಗಳನ್ನು ಸ್ವಾನುಭವಕ್ಕೆ ತಂದುಕೊಳ್ಳುವಂತೆ ಅಂತರ್ನಿರೀಕ್ಷಣೆಗೆ ಅವಕಾಶವಾಗುವಂತೆ ಸಮಾಜವನ್ನು ಪ್ರಬೋಧಿಸಿ ಹಸನುಗೊಳಿಸಿದ ಮಹಾಚೇತನ ಪುರಂದರದಾಸರದು. ಭಕ್ತಿ ಜ್ಞಾನ ಸದಾಚಾರಗಳ ಆದರ್ಶ ಸಮುಚಿತ ಸಮರಸ ಸಮ್ಮಿಳನವನ್ನು ಪುರಂದರದಾಸರ ಕೃತಿಗಳಲ್ಲಿ ಕಾಣಬಹುದು.

ಲೋಕದ ಆಮಿಷಗಳ ತೆರೆಯಲ್ಲಿ ಕೊಚ್ಚಿ ಮುಳುಗಿ ಹೋಗದೆ ಈಸ ಬೇಕು—ಇದ್ದು ಜೈಸಬೇಕು; ಮಾನವಜನ್ಮ ದೊಡ್ಡದು—ದೊರೆಯುವುದಂತೂ ತುಂಬ ದುರ್ಲಭ; ಅದನ್ನು ಹಾಳುಮಾಡಿ ಕೊಳ್ಳಬಾರದು; ಸಾಧನೆಯೇ ಜೀವನದ ಉಸಿರಾಗಬೇಕು ಎಂಬ ವೀರೋದಾರವಾಣಿ ಎಂದೂ ಹಚ್ಚ ಹಸುರಾಗಿ ನಿಲ್ಲುವಂತಹುದು.

ಲೋಕದಲ್ಲಿ ಹೇಗಿರಬೇಕು ಎಂಬ ಪ್ರಶ್ನೆಗೆ ಉತ್ತರ ನೀಡಿದ್ದಾರೆ ದಾಸರಾಯರು.

ಕಲ್ಲಾಗಿ ಇರಬೇಕು ಕಠಿಣಭವತೊರೆಯೊಳಗೆ
ಬಿಲ್ಲಾಗಿ ಇರಬೇಕು ತನ್ನವರೊಳಗೆ
ಮೆಲ್ಲಗೇ ಮಾಧವನ ಮನವ ಮೆಚ್ಚಿಸಲು ಬೇಕು

ಇಂತಹ ಮಾನವ ಧನ್ಯ—ಅದು ಅವನ ಮಹಾಭಾಗ್ಯ.

ಹ್ಯಾಂಗಿರಬೇಕು ಸಂಸಾರದಲ್ಲಿ?
ಹ್ಯಾಂಗೆ ಬರೆದಿತ್ತೊ ಪ್ರಾಚೀನದಲ್ಲಿ

ಅದು ತಿಳಿಯುವುದು ಹೇಗೆ ಎಂಬುದಕ್ಕೆ ಉತ್ತರ

ಹಕ್ಕಿ ಬಂದು ಅಂಗಳದಲ್ಲಿ ಕುಳಿತಂತೆ
ಹಾರಿ ಹೋದಂತೆ!

ನಿರ್ಲಿಪ್ತವಾಗಿ ಜೀವನವನ್ನು ನಡೆಸಬೇಕು—ಎಂದಿದ್ದಾರೆ. ಅದಿಲ್ಲ ಇದಿಲ್ಲ ಎಂದು ಕೇಳಲು ನಮಗೆ ಅರ್ಹತೆ—ಹಕ್ಕು ಎಲ್ಲಿದೆ ಇಲ್ಲವೇ ಇಲ್ಲ ಎನ್ನುತ್ತಾರೆ.

'ಬಿನ್ನಹಕೆ ಬಾಯಿಲ್ಲವಯ್ಯ' ಏಕೆ ಎಂದರೆ ಅನಂತ ಅಪರಾಧ ಎನ್ನಲ್ಲಿ ಇರಲಾಗಿ!

ಏನು ಅಂತಹ ಅಪರಾಧಗಳು ನಾವು ಮಾಡಿದ್ದು?

ಶಿಶುಮೋಹ, ಸತಿಮೋಹ, ಜನನಿಜನಕರ ಮೋಹ, ರಸಿಕಭ್ರಾತರಮೋಹ, ರಾಜಮೋಹ, ಪಶುಮೋಹ, ಭೂಮೋಹ, ಬಂಧುವರ್ಗದಮೋಹ— ಈ ಮೋಹ ಸಮುದಾಯದಲ್ಲಿ ಸ್ವರೂಪೋದ್ಧಾರಕನಾದ ಅನಿಮಿತ್ತ ಬಂಧುವಾದ ಶ್ರೀಹರಿಯ ಸ್ಮರಣೆಯಲ್ಲಿ? ಮೋಹಜಾಲ ಹೀಗಾದರೆ ಮದದ ವೈಖರಿ ಬೇರೆ— ಅನ್ನಮದ, ಅರ್ಥಮದ, ಅಖಿಳ ವೈಭವದಮದ, ತನಗೆದುರಿಲ್ಲವೆಂಬ ಮದಗಳು ವಿಜೃಂಭಿಸುತ್ತವೆ. ಆಸೆಯೋ ಅಜನ ಲೋಕವನ್ನೇ ಮುಟ್ಟುತ್ತದೆ. ಇಷ್ಟು ಇದ್ದರೆ ಅಷ್ಟು ಬೇಕು; ಅಷ್ಟು ದೊರಕಿದರೆ ಮತ್ತಷ್ಟು ಬೇಕು; ಕಷ್ಟವೇ ಬೇಡ— ಕಡು ಸುಖವೇ ಇರಲಿ ಎಂಬ ಆಸೆ—ಆಸೆಗೆ ಎಲ್ಲೆಯೇ ಇಲ್ಲ. ಅರ್ಹತೆ ನೋಡಿದರೆ ಅಲ್ಲಿ ಅದೇ ಇಲ್ಲ. ಧರ್ಮಕ್ಕೆ ಒಂದು ಕಾಸು ಕೋಟಿ ಹೊನ್ನು; ಅಧರ್ಮಕ್ಕೆ ಕೋಟಿ ಹೊನ್ನು ಒಂದೇ ಕಾಸು! ಈ ಮೋಹ ಮದ ಆಸೆ ಆಮಿಷಗಳು ತುಂಬಿಕೊಂಡಿರುವ ಮಾನವನಿಗೆ ಶುದ್ಧ ಹೃದಯದ ಅಮಲ ಭಕ್ತಿ ಬರುವುದು ಕೂಡುವುದು ಕಡುಕಷ್ಟ.

ಮಾನವನ ಸ್ಥಿತಿ ಹೀಗಿರುವಾಗ ಅವನು ಎಷ್ಟು ಎಚ್ಚೆತ್ತಿದ್ದರೂ ಜಾಗರೂಕವಾಗಿದ್ದರೂ ಕಡಿಮೆಯೇ. ದಿನದಿನವೂ ತನ್ನನ್ನು ತಾನೇ ಪರೀಕ್ಷಿಸಿಕೊಂಡು ವಿಮರ್ಶೆ ಮಾಡಿಕೊಳ್ಳುತ್ತಾ ತಿದ್ದಿಕೊಳ್ಳುತ್ತಾ ಅಹಂಮಮಗಳನ್ನು ಬಿಡುವುದರ ಕಡೆ ಮುನ್ನಡೆಯುತ್ತ ಸಾಧನೆ ಮಾಡಿಕೊಂಡರೆ ಶ್ರೀಹರಿ ಉದ್ಧರಿಸುವನು ಎಂದಿದ್ದಾರೆ.

ಪುರಂದರದಾಸರ ಹೆಸರು ಕರ್ನಾಟಕ ಸಂಗೀತ, ಕನ್ನಡಸಾಹಿತ್ಯ ದ್ವೈತ ಸಿದ್ಧಾಂತ, ಭಕ್ತಿ ಪ್ರಪಂಚಗಳಲ್ಲಿ ಈ ಕಾರಣಗಳಿಂದ ಚಿರ ಹಸಿರಾಗಿ ನಿಲ್ಲುವುದಾಗಿದೆ—ನಿಂತಿದೆ.

ಹರಿದಾಸ ವೃಂದದ ಜೀವಜೀವಾಳನಾಗಿ, ಭಕ್ತಿ ಜ್ಞಾನ ವೈರಾಗ್ಯಗಳ ಮೂರ್ತಿಯೇ ಆಗಿ ಆದರ್ಶ ಅಪೂರ್ವ ಸಂತಕವಿಯಾಗಿ ಸಜ್ಜನೋದ್ಧಾರ ಮಾಡಿದ ಪುಣ್ಯಪುರುಷರು ಪುರಂದರದಾಸರು.

ಪುರಂದರದಾಸರ ಅಮೃತವಾಣಿ ಸುಂದರ ಮಧುರ ಮನೋಹರ ಅದನ್ನು ಕೇಳಿದವರ ಓದಿದವರ ಹಾಡಿದವರ ಮನನ ಮಾಡಿದವರ ಹೃದಯವನ್ನು ಅಲುಗಿಸಿ ಹಸನುಗೊಳಿಸಿ, ಶೀಲವನ್ನು ತಿದ್ದಿ, ವಿವೇಚನಾ ಶಕ್ತಿಯನ್ನು ಕುದುರಿಸಿ ಉದಾತ್ತಗೊಳಿಸುತ್ತದೆ, ಆತ್ಮೋದ್ಧಾರಕಾರಕವೂ ಆಗುತ್ತದೆ.

ಶಾಸ್ತ್ರ—ಸಿದ್ಧಾಂತವೆಂಬ ಪ್ರಭುಸಮ್ಮಿತಿಯ ಜಡತೆ - ಜಟಿಲತೆ — ಕ್ಲಿಷ್ಟತೆಗಳನ್ನು ಕಳೆದು ಮಾನವ ಹೃದಯ ಮಾನವೀಯವಾಗಿಯೂ, ಆರ್ದ್ರವಾಗಿಯೂ ಆಗುವಂತೆ ತನ್ನ ವಿಶಿಷ್ಟ ಪ್ರಭಾವದ ಮುದ್ರೆಯನ್ನೊತ್ತಿ ಪರಿಣಾಮರಮಣೀಯವನ್ನುಂಟು ಮಾಡುತ್ತದೆ.

ಮಾನವರ ಭವರೋಗಕ್ಕೆ ಹರಿಭಕ್ತಿ ಹರಿಸ್ಮರಣೆ, ಹರಿಚಿಂತನೆಯ ಚಿಕಿತ್ಸೆ ನೀಡಿದ ಭಿಷಕ್ ಭಾನುವೂ ಅವರಾಗಿದ್ದಾರೆ.

ಅತಿಯಾಸೆ ಅವಿವೇಕ ಮಾತ್ಸರ್ಯಗಳ ಮುದ್ದೆಯಾಗಿ ಮನುಷ್ಯ ಮಾಡುವ ಅನುಚಿತ ಕಾರ್ಯಗಳಿಗೆ — ಪಾಪ ಕರ್ಮಗಳಿಗೆ ತಡೆ ಹಾಕಲು ಧರ್ಮದ ಅರಿವು ಆಗತ್ಯ. ಧರ್ಮ ಪ್ರಜ್ಞೆಯಿಲ್ಲದ ಬಾಳು ಬ್ರೇಕಿಲ್ಲದ ಕಾರು! ಅಪಾಯದಿಂದ ಪಾರುಮಾಡುವ ಧರ್ಮದ ಅರಿವು ದಾಸರ ಅಮರ ವಾಣಿಯಿಂದ ನಮಗೆ ದೊರಕುತ್ತದೆ.

ಶುಷ್ಕ ಹೃದಯಕ್ಕೂ ಅಮೃತಸೇಚನ ಮಾಡಿ ಮೃದು ಮಾಡುವ ಅಪೂರ್ವ ಶಕ್ತಿ ಅದಕ್ಕುಂಟು.

★

# ಪರ್ಯಾಯ ಮಹೋತ್ಸವ

ಶ್ರೀ ಎಸ್.ಆರ್. ಸೂರ್ಯಪ್ರಕಾಶ್

ಶ್ರೀ ಮಧ್ವಾಚಾರ್ಯರ ಏರ್ಪಾಡಿನಂತೆ ಅಷ್ಟಮಠಗಳ ಯತಿಗಳು ಸರದಿಯಂತೆ ಎರಡೆರಡು ತಿಂಗಳಕಾಲ ಉಡುಪಿಯಲ್ಲಿರುವ ಶ್ರೀಕೃಷ್ಣನ ಪೂಜೆ ಮಾಡುತ್ತಿದ್ದರು. ಶ್ರೀ ವಾದಿರಾಜ ಸ್ವಾಮಿಗಳ ಕಾಲದಲ್ಲಿ ಈ ಪದ್ಧತಿ ಬದಲಾಗಿ ಪೂಜಾಧಿಕಾರದ ಅವಧಿ ಒಂದೊಂದು ಮಠಕ್ಕೆ ಎರಡೆರಡು ವರ್ಷವಾಯಿತು. ಹೀಗೆ ಪೂಜಾಧಿಕಾರ ವಹಿಸಿಕೊಳ್ಳುವ ಉತ್ಸವವೇ ಪರ್ಯಾಯ ಮಹೋತ್ಸವ. ಪ್ರತಿ ಎರಡು ವರ್ಷಗಳಿಗೊಮ್ಮೆ ನಡೆಯುವ ಈ ಉತ್ಸವ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತದೆ. ಹೀಗೆ ಪ್ರತಿಯೊಬ್ಬ ಯತಿಗಳಿಗೆ 14 ವರ್ಷಗಳಿಗೊಮ್ಮೆ ಉಡುಪಿಯ ಶ್ರೀಕೃಷ್ಣನ ಪೂಜೆ ಮಾಡುವ ಅವಕಾಶ ದೊರೆಯುತ್ತದೆ.

ಪರ್ಯಾಯವನ್ನು ಸ್ವೀಕರಿಸಲಿರುವ ಯತಿಗಳು, 'ಪರ್ಯಾಯ'ಕ್ಕೆ ಎರಡು ವರ್ಷ ಪೂರ್ವದಿಂದಲೇ ಸಿದ್ಧತೆ ಮಾಡಿಕೊಳ್ಳಬೇಕಾಗುತ್ತದೆ. ಹಿಂದಿನ ಪರ್ಯಾಯ ಮುಗಿದಾಗಿನಿಂದ, ಯತಿಗಳು ದೇಶ ಸಂಚಾರ ಕೈಕೊಳ್ಳುತ್ತಾರೆ. ಹೀಗೆ ದೇಶ ಸಂಚಾರ ಕಾಲದಲ್ಲಿ ಸಂಗ್ರಹವಾದ ಕಾಣಿಕೆಗಳನ್ನು ಈ ಪರ್ಯಾಯದ ಕಾಲದಲ್ಲಿ ವಿನಿಯೋಗಿಸುತ್ತಾರೆ. ಆಗ ಪ್ರತಿವರ್ಷವೂ 'ಚಾತುರ್ಮಾಸ' ವ್ರತವನ್ನು ಕೈಗೊಂಡು, ಭಕ್ತವೃಂದಕ್ಕೆ ಧಾರ್ಮಿಕ ಬೋಧನೆಗಳನ್ನು ಮಾಡುತ್ತಾರೆ. 'ಸಂಕ್ರಾಂತಿ'ಗೆ ಒಂದು ವಾರ ಮುಂಚಿತವಾಗಿ ಉಡುಪಿಯ ತೀರ ಸಮೀಪಕ್ಕೆ ಬಂದು ನೆಲಸುವರು. ಪರ್ಯಾಯಕ್ಕೆ ಹದಿಮೂರು ತಿಂಗಳುಗಳ ಮೊದಲೇ ಬಾಳೇಸಸಿಗಳನ್ನೂ ತುಳಸಿಸಸಿಗಳನ್ನೂ ಅನೇಕ ಬಗೆಯ ತರಕಾರಿಗಳ ಸಸಿಗಳನ್ನೂ ಮಠಕ್ಕೆ ಸೇರಿದ ಸ್ಥಳದಲ್ಲಿ ನೆಟ್ಟು ಪರ್ಯಾಯ ಸಂದರ್ಭದಲ್ಲಿ ಬೇಕಾಗಬಹುದಾದ ಸೌದೆಯನ್ನು ಭಾರೀ ಗಾತ್ರದ ರಥದ ಆಕಾರದಲ್ಲಿ ಜೋಡಿಸಿರುತ್ತಾರೆ. ಉತ್ಸವಕ್ಕೆ ಎರಡು ತಿಂಗಳ ಮೊದಲು. ಮುಂದಿನ ಪರ್ಯಾಯಕ್ಕೆ ಬೇಕಾಗುವ ಭತ್ತದ ಸಂಗ್ರಹ ಮಾಡಲಾಗುವುದು.

ಪರ್ಯಾಯಕ್ಕೆ ಬರಲಿರುವ ಸ್ವಾಮಿಗಳನ್ನು ನಗರದ ಗಣ್ಯರೂ ಸಾವಿರಾರು ಭಕ್ತಜನರೂ ಕೂಡಿಕೊಂಡು ಪೂರ್ಣ ಕುಂಭದೊಡನೆ ಮೆರವಣಿಗೆಯಲ್ಲಿ ಸ್ವಾಗತಿಸುವರು. ಯತಿಗಳು ಶ್ರೀ ಅನಂತೇಶ್ವರ ಮತ್ತು ಶ್ರೀ ಕೃಷ್ಣನ ದರ್ಶನ ಪಡೆದು ತಮ್ಮ ಸ್ವಂತ ಮಠಕ್ಕೆ ಆಗಮಿಸುವರು. ಅದೇ ಸಮಯ ಉತ್ಸವಕ್ಕೆ ಬೇಕಾಗಬಹುದಾದ ಅಕ್ಕಿಯನ್ನು ಸಂಗ್ರಹಿಸಲಾಗುವುದು. ಉತ್ಸವದಲ್ಲಿ ಉಡುಪಿಯ ಹೊರಗಡೆಯಿಂದ ಬಂದ ಭಕ್ತಜನತೆ ಧನಧಾನ್ಯಗಳನ್ನು ಯತಿವರ್ಯರಿಗೆ ಕಾಣಿಕೆಯಾಗಿ ಅರ್ಪಿಸುತ್ತಾರೆ. ಉಳಿದ ಮಠಗಳ ಸ್ವಾಮಿಗಳೂ ಪರ್ಯಾಯಕ್ಕೆ ಬರಲಿರುವವರನ್ನು ಆದರದಿಂದ ಬರಮಾಡಿಕೊಳ್ಳುವರು. ಸಂಕ್ರಾಂತಿ ಇನ್ನು ಆರು ದಿನಗಳಿರುವಾಗ, ಶ್ರೀ ಕೃಷ್ಣನ ರಥೋತ್ಸವಗಳು ಮತ್ತು ಅನೇಕ ಉತ್ಸವ ಪೂಜಾದಿಗಳನ್ನು ಪ್ರತಿ ದಿನ ನಡೆಸಲಾಗುವುದು. ಸಂಕ್ರಾಂತಿ ದಿನದಂದು ಎಲ್ಲ ಉತ್ಸವಗಳೂ ಮುಕ್ತಾಯವಾಗುತ್ತವೆ. ರಥಕ್ಕೆ ಗರುಡನ ಪ್ರದಕ್ಷಿಣೆಯಾದ ತರುವಾಯ ರಥೋತ್ಸವ ಮೆರವಣಿಗೆ ಹೊರಡುವುದು. ಮೇಲಿನ ಉತ್ಸವಗಳಾದ ಮೂರು ದಿನಗಳ ತರುವಾಯದ ಉತ್ಸವವೇ ಪರ್ಯಾಯ ಮಹೋತ್ಸವ. ಉಡುಪಿಯಿಂದ ಎಂಟು ಮೈಲಿ ದಕ್ಷಿಣದಲ್ಲಿರುವ ದಂಡ ತೀರ್ಥದಲ್ಲಿ ಸ್ವಾಮಿಗಳು ಮಿಂದು ಧಾರ್ಮಿಕ ವಿಧಿಗಳನ್ನು ಪೂರೈಸಿ ಉಡುಪಿಯ ಕಡೆಗೆ ಆಗಮಿಸುವರು. ಉಡುಪಿ ಇನ್ನೂ ಒಂದು ಮೈಲಿ ದೂರವಿರುವಾಗಲೇ ಉಳಿದ ಆರು ಮಠಗಳ ಸ್ವಾಮಿಗಳೂ ಪುರಪ್ರಮುಖರೂ ಸ್ವಾಮಿಗಳನ್ನು ಬರಮಾಡಿಕೊಂಡ ಮೇಲೆ, ಸರ್ವಾಲಂಕೃತವಾದ ಆನೆಯಮೇಲೆ ಯತಿಗಳನ್ನು ಕುಳ್ಳಿರಿಸಿ ಮೆರವಣಿಗೆ ಮಾಡುತ್ತಾರೆ. ಉಡುಪಿಯ ರಥದ ಬೀದಿಯ ಪ್ರಾರಂಭದಲ್ಲಿ ಯತಿಗಳು ಅಂಬಾರಿಯಿಂದಿಳಿದು, ಕನಕನ ಕಿಂಡಿಯ ಮೂಲಕ ಶ್ರೀ ಕೃಷ್ಣನ ದರ್ಶನ ಪಡೆಯುತ್ತಾರೆ. ಇದಾದ ಮೇಲೆ, ಸ್ವಾಮಿಗಳು ದೇವಾಲಯದ ಮಹಾದ್ವಾರದ ಮೂಲಕ ಶ್ರೀ ಕೃಷ್ಣ ಮಂದಿರವನ್ನು ಪ್ರವೇಶಿಸುತ್ತಾರೆ. ಈವರೆಗೆ ಪರ್ಯಾಯದಲ್ಲಿದ್ದ ಸ್ವಾಮಿಗಳು ಈ ಹೊಸ ಸ್ವಾಮಿಗಳನ್ನು ಬರಮಾಡಿಕೊಂಡು ವಿಧ್ಯುಕ್ತವಾಗಿ ದೇವಾಲಯದೊಳಗೆ ಕರೆದೊಯ್ಯುತ್ತಾರೆ. ತರುವಾಯ ವಿಶೇಷ ಪೂಜಾದಿಗಳನ್ನು ಮಾಡಿದ ನಂತರ, ಮೊದಲಿನ ಸ್ವಾಮಿಗಳು ಪರ್ಯಾಯಕ್ಕೆ ಬಂದ ಸ್ವಾಮಿಗಳಿಗೆ ದೇವಾಲಯದ ಸರ್ವ ಅಧಿಕಾರಗಳನ್ನು ಒಪ್ಪಿಸುವರು. ತರುವಾಯ, ಯತಿಗಳು ಧಾರ್ಮಿಕ ಸಭೆಯನ್ನು ನಡೆಸಿ ಆ ಸಭೆಯಲ್ಲಿ ವಿದ್ವಾಂಸರಿಗೆ ಸನ್ಮಾನ ಮಾಡುವರು. ಗಂಧ, ಫಲ ಪುಷ್ಪಗಳನ್ನು ಯತಿಗಳಿಂದ ಪಡೆದ ಭಕ್ತರು ಸಂತೋಷದಿಂದ ಭೋಜನ ಮಾಡುವರು. ಅಂದು 50,000ಕ್ಕೂ ಹೆಚ್ಚು ಜನರ ಭೋಜನವಾಗುವುದು. ಪಂಢರಪುರವು 'ಶಬ್ದ ಬ್ರಹ್ಮ'ವೆಂದು ಹೆಸರಾಗಿದ್ದರೆ, ತಿರುಪತಿಗೆ 'ದ್ರವ್ಯ ಬ್ರಹ್ಮ'ವೆಂದು ಹೆಸರಿದೆ. ಆದರೆ ಉಡುಪಿಯು 'ಅನ್ನ ಬ್ರಹ್ಮ' ವೆಂದು ಪ್ರಸಿದ್ಧವಾಗಿದೆ.

(32 ನೇ ಪುಟ ನೋಡಿ)

# ವಿದೇಶಗಳಲ್ಲಿ ಶ್ರೀ ವೆಂಕಟೇಶ್ವರಾಲಯ

## ಸಿಡ್ನಿ

ಇಂದಿನ ದಿನಗಳಲ್ಲಿ ನಮ್ಮ ದೇವಾಲಯಗಳು ದೇಶದೇಶಗಳಲ್ಲಿ ಬೆಳಗುತ್ತಿವೆ. ಅಂದಿನ ಕಾಲದಲ್ಲಿ ಜಾವಾದಲ್ಲಿ ಬೋರೋಬುದೂರ್ ದೇವಾಲಯವನ್ನು ನಿರ್ಮಿಸಿದ ಭಾರತೀಯ ಪ್ರತಿಭೆ ಇಂದಿಗೂ ನವನವೋನ್ಮೇಷನಾಗಿ ವಿರಾಜಿಸುತ್ತಿದೆ

ಪೀಟ್ಸ್‌ಬರ್ಗ್‌ನಲ್ಲಿರುವ ಶ್ರೀ ವೆಂಕಟೇಶ್ವರ ದೇವಾಲಯ ಇಂದು ತೀರ್ಥಕ್ಷೇತ್ರವಾಗಿ ಭಕ್ತ ಕೋಟಿಯನ್ನು ಆಕರ್ಷಿಸುತ್ತಿದೆ. ಕಳೆದವಾರ ವಯಸ್ಸಾದ ಒಬ್ಬಾಕೆ ನನ್ನನ್ನು ಸಂಧಿಸಿದರು. ಆ ದೂರದೇಶದ ಪಿಟ್ಸ್‌ಬರ್ಗ್‌ನಲ್ಲಿನ ಆ ದೇವಾಲಯವನ್ನು ನೋಡಿದ ಕೂಡಲೆ ತನ್ನ ಪ್ರಾಣ ಎದ್ದುಬಂದಂತಾಯಿತೆಂದು ಆಕೆ ಎಷ್ಟೋ ಸಂತೃಪ್ತಿಯಿಂದ ವರ್ಣಿಸಿದರು. ಆ ದೇವಾಲಯದ ಕಾರಣದಿಂದಾಗಿ ತಾನು ಅಮೆರಿಕಾದಲ್ಲಿ ಇದ್ದಷ್ಟು ಕಾಲವೂ ಎಲ್ಲಿಯೋ ದೂರದ ಸಪ್ತಸಮುದ್ರಗಳಿಗೆ ಆಚೆ ಇರುವೆನೆಂಬ ಭಾವನೆ ತನಗೆ ಉಂಟಾಗಲೇ ಇಲ್ಲವೆಂದು ಆಕೆ ಹೇಳಿದರು. ಮೊಮ್ಮಗ ಹುಟ್ಟಿದಾಗ ಆಕೆ ಯಥಾಪ್ರಕಾರ ಪೂರೈಸಬೇಕಾದ ತನ್ನ ಮನೋಭಿಲಾಷಗಳನ್ನು ನಡೆಸಿ, ಎಳೆಮಗುವನ್ನು ದೇವಾಲಯಕ್ಕೆ ಎತ್ತಿಕೊಂಡುಹೋಗಿ ದೇವರಿಗೆ ನಮಸ್ಕಾರ ಮಾಡಿಸಿದಳು. ಆಕೆಗೆ ಅದೇ ಎಷ್ಟೋ ಸಂತೋಷ.

ಈ ಮಧ್ಯೆ ಸಿಡ್ನಿಯಲ್ಲಿಯೂ ಸಹ ಒಂದು ದೇವಾಲಯವನ್ನು ನಿರ್ಮಿಸುವುದಕ್ಕೆ ಪ್ರಯತ್ನಗಳು ನಡೆಯುತ್ತಿರುವುದೇ ವಿಶೇಷ. ಆಸ್ಟ್ರೇಲಿಯಾದಲ್ಲಿ ವರ್ಷಕ್ಕೆ ಹಿಂದೆ ಶ್ರೀ ವೆಂಕಟೇಶ್ವರ ಸಮಿತಿ ನೇಮಕಗೊಂಡಿದೆ. ಆಗಲೇ ಸ್ಥಳ ಶೇಖರಣೆಯ ಕೆಲಸ ಪೂರ್ತಿ ಆಗುತ್ತಾ ಬಂದಿದೆ.

ಪಿಟ್ಸ್‌ಬರ್ಗ್‌ನಲ್ಲಿರುವ ಶ್ರೀ ವೆಂಕಟೇಶ್ವರ ದೇವಾಲಯ ತಮಗೆ ವರಪ್ರದಾನವಾಗಿದೆಯೆಂದು ಆ ಸಮಿತಿಯವರು ಸಗರ್ವದಿಂದ ಪ್ರಕಟಿಸಿದ್ದಾರೆ. ಎಲ್ಲರೂ ಹೋಗಿ ಪೂಜೆಗಳನ್ನು ಮಾಡಿಕೊಳ್ಳುವುದಕ್ಕೆ ತಮಗೊಂದು ಆಲಯದ ಅವಶ್ಯಕತೆ ಇದೆ ಎಂಬ ಭಾವನೆ ಆಸ್ಟ್ರೇಲಿಯಾದಲ್ಲಿರುವ ಹಿಂದೂಗಳಲ್ಲಿ ವ್ಯಾಪಿಸಿದೆಯೆಂದು ಸಮಿತಿ ಗುರ್ತಿಸಿದೆ. ಸಿಂಹಳ ವಾಸಿಗಳು, ಮಲೇಷಿಯಾ ವಾಸಿಗಳು, ಸಿಂಗಪೂರ್ ವಾಸಿಗಳು, ಭಾರತೀಯರು ಎಲ್ಲರೂ ಈ ದೇವಾಲಯ ನಿರ್ಮಾಣದ ಕನಸು ನನಸಾಗಲು ಉತ್ಸಾಹದಿಂದ ಮುಂದೆ ಬಂದರು.



ಸಮಿತಿ "ಸಪ್ತಗಿರಿ" ಎಂಬ ತ್ರೈಮಾಸಿಕ ವಾರ್ತಾಪತ್ರಿಕೆಯನ್ನು ಪ್ರಕಟಿಸುತ್ತಿದೆ. ಆಲಯದ ನಿರ್ಮಾಣದ ಕೆಲಸ ಹೇಗೆ ಹಂತ ಹಂತವಾಗಿ ನಡೆಯುತ್ತಿದೆ ಎಂಬುದನ್ನು ಈ ಪತ್ರಿಕೆಯ ಸಂಚಿಕೆಗಳನ್ನು ಪರಿಶೀಲಿಸಿದರೆ ಅರ್ಥವಾಗುತ್ತದೆ. ಲಾಭದಲ್ಲಿ ಆಸಕ್ತಿ ಇಲ್ಲದ ಸಂಸ್ಥೆ ಈ ಸಮಿತಿ.

ಸಿಡ್ನಿಯಲ್ಲಿನ ಆಲಯವನ್ನು 30 ವರ್ಷಗಳಲ್ಲಿ ನಿರ್ಮಿಸುತ್ತಾರೆ. ಮೊದಲ 10 ವರ್ಷಗಳಲ್ಲಿ ಒಂದು ಸಾಂಸ್ಕೃತಿಕ ಕೇಂದ್ರವನ್ನು ನಿರ್ಮಿಸುತ್ತಾರೆ. ಶ್ರೀ ವೆಂಕಟೇಶ್ವರಸ್ವಾಮಿ ಆಲಯಕ್ಕೆ ಇಕ್ಕೆಲಗಳಲ್ಲಿ ಅಲುಮೇಲುಮಂಗಾದೇವಿಯವರ ಆಲಯ, ಗೋದಾದೇವಿಆಲಯ ನಿರ್ಮಿಸುತ್ತಾರೆ. ಇತರ ದೇವತೆಗಳ ದೇವಾಲಯಗಳನ್ನು ನಿರ್ಮಿಸಲೂ ಸಹ ಸ್ಥಳವನ್ನು ಮೀಸಲಿಟ್ಟಿದ್ದಾರೆ.

ಈ ಆಲಯ ನಿರ್ಮಾಣಕ್ಕೆ ತಿರುಮಲೆ-ತಿರುಪತಿ ದೇವಸ್ಥಾನ, ಆಂಧ್ರಪ್ರದೇಶ ಸರ್ಕಾರ, ಪಿಟ್ಸ್‌ಬರ್ಗ್ ಆಲಯಗಳು ಸಲಹೆ, ಸೂಚನೆಗಳನ್ನು ಕೊಡುತ್ತಿವೆ. ಪ್ರಸ್ತುತ ಆರ್ಥಿಕ ಸಹಾಯವನ್ನೂ ಸಹ ಮಾಡಬಹುದು. ಆಲಯ ನಿರ್ಮಾಣಕ್ಕೆ 1,50,000 ಡಾಲರುಗಳು ವೆಚ್ಚವಾಗಬಹುದೆಂದು ಅಂದಾಜು ಮಾಡಲಾಗಿದೆ.

ಸಿಡ್ನಿ ನಗರಕ್ಕೆ 50 ಕಿ. ಮೀಟರು ದೂರದಲ್ಲಿರುವ ಹೆಲೆನ್ಸ್‌ಬರ್ಗ್‌ನಲ್ಲಿ ದೇವಾಲಯವನ್ನು ನಿರ್ಮಿಸುತ್ತಾರೆ. ಬೆಟ್ಟ ಶಿಖರಗಳೊಂದಿಗೆ ಪ್ರಕೃತಿ ಸಂಪತ್ತಿನಿಂದ ಕಣ್ಣಿಗೆ ಹಬ್ಬವನ್ನುಂಟುಮಾಡುವಂತಿದ್ದು, ಆ ಪ್ರದೇಶದಲ್ಲಿ ಆರೂವರೆ ಎಕರೆ ಸ್ಥಳವನ್ನು ಕೊಳ್ಳಲು ಏರ್ಪಾಡುಗಳು ಪೂರ್ತಿಯಾಗಿವೆ. ಶ್ರೀ ವೆಂಕಟೇಶ್ವರಸ್ವಾಮಿ ಆಲಯವನ್ನು ನಿರ್ಮಿಸುವ ಸಮಯದಲ್ಲಿ ತಿರುಮಲೆ ತಿರುಪತಿ ಹೇಗೆ ಪ್ರಕೃತಿ ರಮಣೀಯತೆಯಿಂದ ಕಂಗೊಳಿಸುವುದೆಂಬುದು ನೆನಪಾಗುವಂತೆ ಮಾಡುತ್ತದೆ ಅಲ್ಲಿನ ಸಹಜ ಸೌಂದರ್ಯ.

ಸಮಿತಿಯ ಅಧ್ಯಕ್ಷರಾದ ಡಾ॥ ಎ ಬಾಲ ಸುಬ್ರಹ್ಮಣ್ಯಂ ಸಿಡ್ನಿ ನಗರದಲ್ಲಿ ಒಬ್ಬ ಪ್ರಮುಖ ಸರ್ಜನ್. ಸಮಿತಿ ಪ್ರಕಟಿಸುತ್ತಿರುವ ವಾರ್ತಾಪತ್ರಿಕೆಯೊಂದರಲ್ಲಿ ತಮಿಳುನಾಡಿನ ಒಬ್ಬ ಭಕ್ತರು ಪುನಲಾರ್ ಕಥೆಯನ್ನೋದಿ, 'ಸಮಿತಿಯವರ ಭಕ್ತಿ ಭಾವನೆಗೆ, ಆಲಯ ನಿರ್ಮಾಣದಲ್ಲಿ ಅವರಿಗೆ ಇರುವ ಶ್ರದ್ಧಾಸಕ್ತಿಗಳಿಗೆ ನಾನು ಹರ್ಷಗೊಂಡಿದ್ದೇನೆ. ಕಡುಬಡವನಾದ ಪುನಲಾರ್ ತನ್ನ ಹೃದಯದಲ್ಲೇ ಪರಶಿವನಿಗೆ ಆಲಯ ನಿರ್ಮಿಸುತ್ತಿರುವ ಅಮರ ಕಥೆ ಇದು' ಎಂದಿದ್ದಾರೆ.

'ವಿಶ್ವವ್ಯಾಪಿ ಧಾರ್ಮಿಕ ಭಾವನೆಯೊಂದಿಗೆ ಉದಾತ್ತವಾದ ಲಕ್ಷ್ಯದೊಂದಿಗೆ ಕೃಷಿ ಮಾಡುತ್ತಿರುವ ಸಮಿತಿಯವರಿಗೆ ಶುಭಾಕಾಂಕ್ಷೆಗಳನ್ನು ಕೋರುವುದು ಆಸ್ತಿಕರೆಲ್ಲರಿಗೆ ಆನಂದಪ್ರದಾನವಾದ ಕರ್ತವ್ಯ' ಎಂದು ಆತ ಹೇಳಿದರು.

ಅನುವಾದ: ಶ್ರೀ ಮು. ಕೃಷ್ಣಪ್ಪ

ಪ್ರೇಮಾನಂದಕುಮಾರರ ಲೇಖನದ

## ಪಿಟ್ಸ್‌ಬರ್ಗ್

"ಮಕ್ಕಳು ಬೆಳೆದು ದೊಡ್ಡವರಾದರೆ ತಂದೆ–ತಾಯಿಗಳಿಗೆ ಅವರನ್ನು ಕುರಿತು ಒಂದಿಲ್ಲೊಂದು ಚಿಂತೆ. ಹೀಗಿರುವಾಗ ನಮ್ಮನ್ನೆಲ್ಲ ಹುಟ್ಟಿಸಿದ ದೇವರಿಗೆ ನಮ್ಮ ವಿಷಯದಲ್ಲಿ ಚಿಂತೆ ಇರಲೇ ಬೇಕಲ್ಲ, ಅದಕ್ಕಾಗಿಯೇ 'ತಿರುಪತಿ ತಿಮ್ಮಪ್ಪ ಅಮೆರಿಕಕ್ಕೆ ಬಂದಿದ್ದಾನೆ' ಮಕ್ಕಳ ಹಿತಚಿಂತನೆ ಆ 'ಸಹಸ್ರನಾಮ' ಅಲ್ಲಿಂದಲೆ ಸಾಧಿಸಲಾರನೇ? ಈ ದೇವರು ವಾಮನನಾಗಿ ಮೂರು ಹೆಜ್ಜೆ ಇಟ್ಟಾಗ ವಿಶ್ವವೇ ತುಂಬಿ ಹೋಯಿತೆಂದು ಪುರಾಣದ ಕಥೆ. ಅಮೆರಿಕಾದವರು ಗರುಡನನ್ನು ತಮ್ಮ ರಾಷ್ಟ್ರೀಯ ಚಿಹ್ನೆಯಾಗಿ ಬಳಸುವುದನ್ನು ನೋಡಿದರೆ ಈ 'ಗರುಡಗಮನ' ಒಂದು ಹೆಜ್ಜೆ ಈ ಪಶ್ಚಿಮ ಪ್ರಸಂಗದಲ್ಲಿ ತಿರುಪತಿಯಿಂದ ಮೂಡಿರಬೇಕು ಅಲ್ಲವೆ ?

"ನಿನ್ನ ವಾಹನ ಕಂಡರು ನೀನೆಲ್ಲಿ ಕಾಣುವದಿಲ್ಲವಲ್ಲ ಪ್ರಭುವೆ" ಎಂದು ಕೆಲವು ಭಕ್ತರು ಹಾಡಿದರು. 1971 ರಲ್ಲಿ ಭಾರತ, ಬಂಗ್ಲಾದೇಶದ ಮುಕ್ತಿಗಾಗಿ ಹೋರಾಡುವಾಗ ಶ್ರೀ ವೆಂಕಟೇಶ್ವರ ದೇವಾಲಯವನ್ನು ಸ್ಥಾಪಿಸಲು ಸಂಕಲ್ಪ ಹೊಂದಿದರು. ಯಾವುದೇ ಕಾರ್ಯ ಸಿದ್ಧಿಗೆ ಮೊದಲು ಸಿದ್ಧಿವಿನಾಯಕನನ್ನು ಅರ್ಚಿಸಬೇಕು. ಅದಕ್ಕಾಗಿ 1972ರಲ್ಲಿ ನ್ಯೂಯಾರ್ಕ್‌ನಲ್ಲಿ ಹಿಂದು ಟೆಂಪಲ್ ಸೊಸೈಟಿ ಗಜಾನನ ದೇವಾಲಯವನ್ನು ಕಟ್ಟಿ ಅಲ್ಲಿ ಶಿವ ಹಾಗು ವಿಷ್ಣು ವಿಗ್ರಹಗಳನ್ನು ಸ್ಥಾಪಿಸಿದೆ. ಹಿಂದು ಟೆಂಪಲ್ ಸೊಸೈಟಿ ಹಾಗು ತಿರುಪತಿ ಶ್ರೀ ವೆಂಕಟೇಶ್ವರ ದೇವಸ್ಥಾನ ಮಂಡಳಿಗಳೊಂದಿಗೆ ಮಾತುಕತೆ ನಡೆಸಿದರು. ಆಂಧ್ರದಲ್ಲಿ ಸೆಖೆ.ವೆಂಕಪ್ಪ ಬೆಟ್ಟದಮೇಲೆ ಮನೆ ಮಾಡಿಕೊಂಡ; ಇಲ್ಲಿಯೂ ಅಂಥದೇ ಸ್ಥಳಬೇಕು, ಪರ್ವತ ಪ್ರದೇಶ ಹುಡುಕಿದರು. ಅಮೆರಿಕಾದ ಐವತ್ತು ರಾಜ್ಯಗಳಲ್ಲಿ 'ಪೆನ್ಸಿಲ್ವೇನಿಯಾ' ಒಂದು. ಈ ರಾಜ್ಯ ಹಚ್ಚ ಹಸಿರು ಪರ್ವತ ಶ್ರೇಣಿಗಳಿಂದ ಸುತ್ತುವರೆದಿದೆ. 'ಅಲಘೇನಿ ಮೌಂಟನ್ಸ್' ಎಂದು ಹೆಸರು. ಈ ಬೆಟ್ಟಗಳಲ್ಲಿ ಈ ರಾಜ್ಯದ ದೊಡ್ಡನಗರ 'ಪಿಟ್ಸ್‌ಬರ್ಗ್', ನೈಸರ್ಗಿಕ ಸಂಪತ್ತು ಹಾಗು ಉದ್ದಿಮೆಗಳ ನಗರ, ಮತ್ತು ಅಮೆರಿಕಾದ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುವುದು. ಅಲಘೇನಿ, ಮೊನೊಂಗೆಹೆಲ್, ಒಹಾಯೊ, ನದಿಗಳ ತ್ರಿವೇಣಿ ಸಂಗಮವಿದೆ.

ಇಂಥ ಸಿರಿವಂತ ರಾಷ್ಟ್ರದ ಸಿರಿವಂತ ಪಟ್ಟಣದ ಸುಂದರ ಪರ್ವತ ಪ್ರದೇಶ ಮೆಚ್ಚಿ ಆಯ್ಕೆ ಮಾಡಿಕೊಂಡು ನಮ್ಮ ಭಾರತದ ಅತಿ ಶ್ರೀಮಂತ ದೇವರು ತಿರುಪತಿ ವೆಂಕಟೇಶ್ವರ ಭಕ್ತರ ಹೃದಯ ಚಿನ್ನದ ಹಾಗೆ ಮಾಡಲಿಕ್ಕೆ ಮನಸ್ಸು ಮಂದಾರದ ಹೂವಿನಂತೆ ಅರಳಿಸಲಿಕ್ಕೆ 1974 ರಲ್ಲಿ "ಪಾದಾರವಿಂದ'ವನ್ನು ಬೆಳೆಸಲು ಆರಂಭಿಸಿದುದೆ ತಿರುಪತಿ ತಿರುಮಲೆ ದೇವಸ್ಥಾನ ಮಂಡಳಿಯ ಕರಾರುಪತ್ರಗಳಿಗೆ ಹಸ್ತಾಕ್ಷರಗಳು ಮೂಡಿದವು.

1976 ರ ಜೂನ್ 30 ರಂದು ಪಿಟ್ಸ್‌ಬರ್ಗ್ ಪೂರ್ವಕ್ಕೆ "ಪೆನ್‌ಹಿಲ್" ಎಂಬ ಗುಡ್ಡ ಪ್ರದೇಶ ಏಳು ಎಕರೆ ಭೂಮಿ ಖರೀದಿ ಆಯಿತು. ಅಂದೇ ಭೂಮಿಪೂಜೆ; ಭಕ್ತರ ಸಮ್ಮುಖದಲ್ಲಿ ಹಾಗು ಆಂಧ್ರ ಸರಕಾರದ ಪ್ರತಿನಿಧಿಗಳು ಆಗಮಿಸಿದ್ದರು. ಶ್ರೀ ವೆಂಕಟೇಶ್ವರ ಸ್ವಾಮಿಯ ಇಬ್ಬರು ಮಡದಿಯರು, ಜಯವಿಜಯರು, ಗರುಡ, ಹನುಮಂತರೊಂದಿಗೆ ಹೈದ್ರಾಬಾದಿನ ಬಾಲಾಜೀಭವನದಲ್ಲಿ ತಯಾರಾಗಿ 1976ರ ಸೆಪ್ಟೆಂಬರ್ ತಿಂಗಳಲ್ಲಿ ನ್ಯೂಯಾರ್ಕ್ ತಲುಪಿದವು. ಕೆನಡಾ ಹಾಗೂ ಅಮೆರಿಕಾಗಳ ಸಹಸ್ರಾರು ಭಕ್ತಜನರು ಸೇರಿ ವಿಜೃಂಭಣೆಯಿಂದ ಶ್ರೀ ವೆಂಕಟೇಶ್ವರನನ್ನು ಬರಮಾಡಿಕೊಂಡರು. ಗರ್ಭಗುಡಿಯಲ್ಲಿ 1976 ಸೆಪ್ಟೆಂಬರ್ 17 ರಂದು ಸ್ಥಾಪಿಸಿದರು. ಅಲಂಕಾರದ ಕಂಬಗಳು, ರಾಜಗೋಪುರ ನವೀನ ತಂತ್ರಜ್ಞಾನ ಅಮೆರಿಕಾದ ತಜ್ಞರು ಒದಗಿಸಿದರು. ಕುಂಭಾಭಿಷೇಕವು ನಡೆಯಿತು. ಮಹಾದ್ವಾರದ ದೊಡ್ಡ ಬಾಗಿಲು ಭಾರತದಲ್ಲಿ ತಯಾರಾದದ್ದು, ಕಟ್ಟಡಕ್ಕೆ ಹಾಲುಗಲ್ಲುಗಳನ್ನು ಹೈದ್ರಾಬಾದನಿಂದ ಬಿರ್ಲಾಗಳು ದಾನ ನೀಡಿದರು ತಿರುಪತಿ ದೇವಸ್ಥಾನದ ಮೂಲಕ. ಪಿಟ್ಸ್‌ಬರ್ಗ್ ನಗರ ಈಗ ಪೂರ್ಣ ಮನಮೋಹಕವಾಗಿದೆ.

ತಮಿಳುನಾಡಿನಲ್ಲಿ ಸಿದ್ಧವಾದ ಹದಿನಾಲ್ಕು ಅಡಿ ಎತ್ತರದ್ದು ಮರದ ರಥವನ್ನು ಇಲ್ಲಿಟ್ಟಿದ್ದಾರೆ. ಪೀತಾಂಬರ ಉಟ್ಟು ಶ್ರೀ ವೆಂಕಟೇಶ್ವರ ಆಳೆತ್ತರದ ಅಲ್ಲಿಯಂತೆಯೇ ರೂಪ, ಅದೇ ಅಲಂಕಾರ. ಅಂದರೆ ಇಲ್ಲಿ ಏಳುವಾಗ ಮಾತ್ರ ತುಂಬ ಹೊತ್ತಾಗಿ. ಇಲ್ಲಿಯ ದೇವರಿಗೆ ಒಂಬತ್ತು ಗಂಟೆಯವೇಳೆಗೆ ಸುಪ್ರಭಾತ ಪ್ರಾರಂಭ. ಬೆಟ್ಟದ ಕೆಳಗಡೆ ದೇವಸ್ಥಾನದ ವಾಯುವ್ಯ ದಿಕ್ಕಿನಲ್ಲಿ ಮಂಟಪದಿಂದ ಸುಶೋಭಿತ ಪುಷ್ಕರಣಿ. ಇಲ್ಲಿ ತೆಪ್ಪೋತ್ಸವ ನಡೆಯುತ್ತದೆ. ವಿದ್ಯುತ್‌ದೀಪ ಹಾಕಿದಾಗ ತಿರುಪತಿ ನೆನಪಾಗಬಹುದು. ಕಛೇರಿಯ ಹಿಂಭಾಗದಲ್ಲಿ ಸುಸಜ್ಜಿತಸಭಾಗೃಹ, ನೃತ್ಯ, ಸಂಗೀತ, ಪ್ರವಚನ, ಕಾರ್ಯಕ್ರಮ ನಡೆಯುವುವು. ಎಂ. ಎಸ್. ಸುಬ್ಬುಲಕ್ಷ್ಮಿ, ಟಿ.ಆರ್. ಸುಬ್ರಮಣ್ಯಂ, ಲಕ್ಷ್ಮೀ ಶಂಕರ, ಬಾಲಮುರಳಿ ಮುಂತಾದವರ ಭಕ್ತಿ ಸಂಗೀತ ತಿರುಪತಿಯವರಿಂದ ಆಗಿವೆ. ಮೊಸರನ್ನದ ರುಚಿ ಇಲ್ಲಿಯೂ ಬದಲಾವಣೆ ಇಲ್ಲ. ತ್ರಿಕೋನಾಕಾರದ ಕಾಗದದಲ್ಲಿ ಚಮಚೆಯೊಂದಿಗೆ ನೀಡುವರು. ನಂಬಿಕೆಗೆ ಒಂದು ಆಶ್ರಯ ಬೇಕು. ಕರೆದಾಗ ಬರುವ ತಿರುಪತಿ ತಿಮ್ಮಪ್ಪ ಅಮೆರಿಕಾದಲ್ಲಿ, ಬಲಹಸ್ತ ನೆಲದತ್ತ ತೋರಿಸುತ್ತ ಇಲ್ಲಿದ್ದಾನೆ ಅಲಘಾನಿಗುಡ್ಡದ ಮೇಲೆ ಅಮೇರಿಕಾದವನಾಗಿ ರಾರಾಜಿಸುತ್ತಿದ್ದಾನೆ.

---

ನ್ಯಾಷನಲ್ ಹೆರಾಲ್ಡ್ ಟೈಮ್ಸ್ ಅನುವಾದ : ಶ್ರೀ ಎಲ್. ಭೋಜರಾಜು. ಬಿ.ಎ;ಎಲ್.ಎಲ್.ಬಿ.

---



ಪಿಟ್ಸ್‌ಬರ್ಗ್‌ನ ದೇವಾಲಯದ "ಆನಂದ ನಿಲಯ"

# ಪಾಜಕ ಕ್ಷೇತ್ರ

**ಶ್ರೀ ಟಿ. ಎಸ್. ಪದ್ಮನಾಭರಾವ್**

ಕನ್ನಡನಾಡಿನ ಧಾರ್ಮಿಕ ಇತಿಹಾಸದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪಾತ್ರ ಹಿರಿದು. ಮಲೆನಾಡಿನ ಸೆರಗಿನ ಅಂಚು ಒಂದುಕಡೆ ಮನೋಹರವಾದರೆ, ಪಶ್ಚಿಮ ಸಮುದ್ರದ ಅಲೆಗಳು, ಇನ್ನೊಂದೆಡೆ,– ಪರ್ವತಶ್ರೇಣಿಯ ನುಣ್ಣನೆಯ ನೀಲಿಬೆಟ್ಟಗಳು. ಇಂತಹ ಶಾಂತ ಪರಿಸರ ಶಂಕರರ ಕಾರ್ಯಕ್ಷೇತ್ರ, ಆಚಾರ್ಯ ಮಧ್ವರ ಜನ್ಮಭೂಮಿಯಾಗಿ ತನ್ನದೇ ಆದ ಕೀರ್ತಿಯನ್ನು ಪಡೆದಿದೆ.

ಹದಿಮೂರನೆಯ ಶತಮಾನವೂ ಅಷ್ಟೆ. ಭಾರತದ ಇತಿಹಾಸದಲ್ಲಿ ಬಹುಮುಖ್ಯವಾದ ಕಾಲ. ಧರ್ಮ, ಕಲೆ, ಆರ್ಷೇಯ ಸಂಸ್ಕೃತಿಗಳ ಅಭಿವೃದ್ಧಿಗಾಗಿ ಮೀಸಲಿದ್ದ ಸಮಯ. ಆಗಲೇ ಉಡುಪಿಯ ಬಳಿ ಪಾಜಕಕ್ಷೇತ್ರದಲ್ಲಿ ಮಹಾನ್ ವಿಭೂತಿ ಪುರುಷರೊಬ್ಬರ ಅವತಾರವಾದುದು. ಅಲ್ಲಿಯ ಸದಿಗುಡ್ಡದ ಬಳಿ ವಾಸಿಸುತ್ತಿದ್ದ ಪರಮ ಸಾತ್ತ್ವಿಕರೂ, ಶಾಸ್ತ್ರವೇತ್ತರೂ ಆದ ನಡುಮನೆ ಭಟ್ಟರಿಗೆ ಸಂತಾನವಿರಲಿಲ್ಲ. ಅನಂತೇಶ್ವರನಿಗೆ ಅವರು ಮೊರೆಯಿಟ್ಟರು. ಉಡುಪಿಯಲ್ಲಿ ಸೇವೆ ಮಾಡಿದರು. ದೇವರು ಕರುಣಿಸಿದ. ಸುಂದರ ಬಾಲಕ ವಾಸುದೇವರು ಅವತರಿಸಿದರು.

೧೨೩೮ ರಲ್ಲಿ ಜನಿಸಿದ ಬಾಲಕ ಅಡೆತಡೆಯಿಲ್ಲದೆ ಎಲ್ಲ ಶಾಸ್ತ್ರಗಳಲ್ಲೂ ಬಲುಬೇಗ ಪರಿಣತಿ ಗಳಿಸಿದ. ಕೇವಲ ಮೂರನೆಯ ವಯಸ್ಸಿನಲ್ಲೇ ಬನ್ನಂಜೆಯ ಶಿವಾಲಯಕ್ಕೆ, ದಾರಿಯುದ್ದಕ್ಕೂ ಎಲ್ಲಕಡೆ ಪರಮಾತ್ಮನನ್ನು ಕಾಣುತ್ತಾ ಹೊರಟ ಈ ಬಾಲಕನ ಜ್ಞಾನಸೂರ್ಯ ಕಿರಣ ಎಲ್ಲಕಡೆ ಸಹಜವಾಗಿಯೇ ಪಸರಿಸಿತು. ಭಟ್ಟರು ಮಗನಿಗೆ ಎಂಟುವರ್ಷದ ಒಳಗೇ ಉಪನಯನ ಮಾಡಿದ್ದರು.

ಸದಿಗುಡ್ಡದಿಂದ, ಉಡುಪಿಯ ಸಮೀಪದ ಕುಂಜಾರಗಿರಿಯಲ್ಲಿ ದುರ್ಗೆಯ ಪ್ರಾಚೀನ ಆಲಯದಲ್ಲಿ ದೇವಿಯನ್ನು ಸೇವಿಸುತ್ತಿದ್ದ ಭಟ್ಟರು ಅಲ್ಲಿಯೇ ನೆಲೆಸಿದರು. ತಪಸ್ವಿಗಳೂ ಆದ ಅಚ್ಯುತಪ್ರೇಕ್ಷರು ಉಡುಪಿಯಲ್ಲಿ ನೆಲೆಸಿದ್ದರು. ವಾಸುದೇವನ ಜ್ಞಾನದ ಚುಂಬಕಶಕ್ತಿ ಅವರನ್ನು ಸಹಜವಾಗಿಯೇ ಸೆಳೆಯಿತು. ತಮ್ಮ ಉತ್ತರಾಧಿಕಾರಿಯಾಗಲು ಇವನಿಗಿಂತ ಅರ್ಹವ್ಯಕ್ತಿ ಇನ್ನೊಬ್ಬನಿಲ್ಲ ಎಂದು ಅರಿತು ಅವರು ವಾಸುದೇವನ ತಂದೆ ತಾಯಿಗಳನ್ನೊಪ್ಪಿಸಿ ಅವನನ್ನು ತಮ್ಮ ಸ್ಥಾನದಲ್ಲಿ ಕುಳ್ಳಿರಿಸಿ, ಯತ್ಯಾಶ್ರಮ ನೀಡಿದರು. ಅಂದಿನಿಂದ ವಾಸುದೇವರು ಪೂರ್ಣಪ್ರಜ್ಞರಾದರು.

ಮುಮುಕ್ಷುಗಳಿಗೆ ವೇದಾಂತದ ಜೇನನ್ನು ಸವಿಯಲು ಅವಕಾಶ ಮಾಡಿಕೊಟ್ಟ ಇವರು 'ಮಧ್ವಾಚಾರ್ಯ' ಎನಿಸಿದರು. 'ಆನಂದತೀರ್ಥ'ರಾಗಿ ಬಾದರಾಯಣರ ವೇದಾಂತಸೂತ್ರಗಳ ಭಾವವನ್ನು ಅರ್ಥೈಸಿ ತಿಳಿಸಿದರು. 37 ಗ್ರಂಥಗಳನ್ನು ರಚಿಸಿ, ಬದರಿಗೆ ತೆರಳಿ ವೇದವ್ಯಾಸರ ದರ್ಶನ ಪಡೆದು ಕೃತಾರ್ಥರಾದರು. ದ್ವೈತ ವೇದಾಂತಸುಧೆಯನ್ನು ಎಲ್ಲೆಡೆ ಹಂಚಿ ಧನ್ಯರಾದರು. ಇವರು ಬದರಿಗೆ ತೆರಳಿದ್ದು ೧೩೧೭ ಎಂದು ವಿದ್ವಾಂಸರ ಅಭಿಮತ. ಹೀಗೆ 80 ವರ್ಷಗಳ ತುಂಬು ಜೀವನದಲ್ಲಿ ಆಚಾರ್ಯರು ಹಾಕಿಕೊಟ್ಟ ದಾರಿಯಲ್ಲಿ ನಡೆದ ಶಿಷ್ಯರು ಅವರ ತತ್ತ್ವಗಳನ್ನು ಹರಡುವುದರಲ್ಲಿ ಯಶಸ್ವಿಯಾದರು. ವಿಷ್ಣು ಸರ್ವೋತ್ತಮತ್ತ್ವ, ಪಂಚಭೇದ ತಾರತಮ್ಯ ಇವು ಮಧ್ವಮತದ ಕೆನೆಮಾತುಗಳು.

ಆಚಾರ್ಯಮಧ್ವರು ಜನಿಸಿದ ಮನೆ ಇಂದೂ ಪಾಜಕಕ್ಷೇತ್ರದಲ್ಲಿದೆ. ಉಡುಪಿಯಿಂದ ಕುಂಜಾರಗಿರಿ ಸುಮಾರು ೮ ಕಿ. ಮೀ. ದೂರದಲ್ಲಿದೆ. ಅಲ್ಲಿಂದ ಒಂದು ಕಿ. ಮೀ. ದಾರಿಯಲ್ಲಿ ಹೊರಟರೆ ಈ ಪ್ರದೇಶ ಸಿಗುತ್ತದೆ. ಆಚಾರ್ಯರು ಹುಟ್ಟಿದ ಮನೆ, ಅಲ್ಲಿ ಅವರು ಪೂಜಿಸಿದ ವಾಸುದೇವನ ಮೂರ್ತಿ, ಸರೋವರ, ತಾಯಿಯ ಕೂಗು ಕೇಳಿಬಟ್ಟದಿಂದ ಹಾರಿ ಅವರನ್ನು ದುರುಳನೊಬ್ಬನಿಂದ ಪಾರುಮಾಡಿದ ಸ್ಥಳ ಇಂದಿಗೂ ಇದೆ. ಅಲ್ಲಿ ಅದೇ ಪರಂಪರೆಯಲ್ಲಿ ಬಂದ ವಾದಿರಾಜರು ಮಧ್ವಾಚಾರ್ಯರ ಮೂರ್ತಿಯೊಂದನ್ನು ಪ್ರತಿಷ್ಠಿಸಿದ್ದಾರೆ. (ಅವರ ಪಾದುಕೆಗಳಿರುವುದರಿಂದ ಇದು ಪಾದುಕಾ–ಪಾಜಕಕ್ಷೇತ್ರವೆನಿಸಿತು.)

ಒಂದೆಡೆ ಪರಶುರಾಮನಬೆಟ್ಟ, ಅಲ್ಲಿನ ಗದಾತೀರ್ಥ, ಇನ್ನೊಂದೆಡೆ ಕುಂಜಾರುಗಿರಿಯ ದುರ್ಗಾಲಯ, ದೂರದಲ್ಲಿ ನಸುನೀಲಿಯ ಕಡಲಂಚಿನ ಕುಡಿನೋಟ. ಇಲ್ಲಿಗೆ ಭೇಟಿಕೊಟ್ಟವರ ಮನ ಸೂರೆಗೊಳ್ಳುತ್ತವೆ. ತಪೋವನವನ್ನು ಪ್ರವೇಶಿಸಿದ ಅನುಭವವಾಗುತ್ತದೆ. ಉಡುಪಿಯಲ್ಲಿ ಮಧ್ವಾಚಾರ್ಯರು ಸ್ಥಾಪಿಸಿದ ಶ್ರೀ ಕೃಷ್ಣ ಮಲ್ಪೆಯ ಕಡಲತಡಿಯಲ್ಲಿ ಅವರಿಗೆ ದೊರೆತ ಮೂರ್ತಿ. ಇಂದು ಉಡುಪಿಯನ್ನು ಅರಿಯದ ಆಸ್ತಿಕರು ಇಲ್ಲವೆಂದೇ ಹೇಳಬೇಕು. ಆದರೆ ಆಚಾರ್ಯರು ಅವತರಿಸದಿದ್ದರೆ ಉಡುಪಿಯೊಂದು ಕಡಲತಡಿಯ ಹಳ್ಳಿಯಾಗುತ್ತಿತ್ತು. ಅವರ ತಪಃಶಕ್ತಿ, ಆರಾಧ್ಯದೈವ ಕೃಷ್ಣನ ಸಾನ್ನಿಧ್ಯ ದೂರದ ಮಹಾಭಕ್ತ ಚೈತನ್ಯದೇವನನ್ನೂ ಇಲ್ಲಿಗೆ ಭೇಟಿಕೊಡುವಂತೆ ಮಾಡಿತ್ತು.

ಪಾಜಕ ಕ್ಷೇತ್ರಕ್ಕೆ ಭೇಟಿಕೊಡುವ ಮಂದಿ ಅದರ ಹಿರಿಮೆಯನ್ನು ಅರಿತವರು ಮಾತ್ರ. ಆದಿನ್ನೂ ಎಲೆಮರೆಯ ಕಾಯಿಯಂತೆ ತಂಪು ಮರಗಳ, ಗುಡ್ಡಗಳ ತಡಿಯಲ್ಲಿ ಶಾಂತವಾಗಿಯೇ ಇದೆ. ಅಲ್ಲಿಗೆ ಹೋದವರಿಗೆ ಆಗುವ ಅನುಭವ ಮಾತ್ರ ಮನನೀಯವಾದದ್ದು. ಮಹಾನ್ ಚೇತನವೊಂದು ಜನ್ಮತಾಳಿದ ಪುಣ್ಯಭೂಮಿ ಇದು ಅಲ್ಲವೆ?

# ದಕ್ಷಿಣ ಕನ್ನಡದ ಯತಿದ್ವಯರು

ನಮ್ಮ ಭಾರತ ದೇವಾಂಶಸಂಭೂತರಿಗೆ ಜನ್ಮವಿತ್ತ ಪುಣ್ಯಭೂಮಿ. ಇಲ್ಲಿ ಪುಣ್ಯ ಪುರುಷರು, ಕಾಲ ಕಾಲದಲ್ಲಿ ಜನ್ಮವೆತ್ತಿ ತಮ್ಮ ಅಪಾರ ಜ್ಞಾನ ಭಕ್ತಿ, ವೈರಾಗ್ಯ, ದಯ, ಶಮದಮಾದಿ ಸದ್ಗುಣಗಳಿಂದ, ಈ ನಾಡಿನಲ್ಲಿ ಬೆಳೆದು, ಬದುಕಿನ ಸಾರ್ಥಕತೆಯನ್ನು ತೋರಿಸಿ, ವಿಪುಲ ಕಾವ್ಯ, ಸಾಹಿತ್ಯ, ಸೃಷ್ಟಿಸಿ, ಜನಸೇವೆ ಮತ್ತು ಭಾಷಾ ಸೇವೆಮಾಡಿ, ನಮ್ಮ ಕಣ್ಣ ಎದುರಿನಲ್ಲಿ ಭಾರತದ ಉಚ್ಚ ಸಂಸ್ಕೃತಿ ವಿಶಿಷ್ಟ ಸಂಪ್ರದಾಯ ಹಾಗೂ ಕಲಾಸೃಷ್ಟಿಯನ್ನು ಇಟ್ಟುಹೋಗಿದ್ದಾರೆ. ಹೇಗೆ ಸಾಹಿತ್ಯ ಮತ್ತು ಧರ್ಮ, ಸಾಹಿತ್ಯ ಮತ್ತು ರಾಜಾಶ್ರಯ ಒಂದಕ್ಕೊಂದು ಪೂರಕವಾಗಿ ಬೆಳೆದು ಬಂತೋ ಅದೇ ರೀತಿ ಈ ಮಹಾಪುರುಷರು ಧರ್ಮಜಿಜ್ಞಾಸೆ ಮಾಡುವಾಗ, ಸಮಾಜ ಸುಧಾರಣೆ ಕಾವ್ಯ ದರ್ಶನ ಹಾಗೂ ಜನಹಿತ ದೃಷ್ಟಿಯ ಸ್ಪಷ್ಟಚಿತ್ರಣ ನಮಗಾಗುತ್ತದೆ.

ರಾಮಕೃಷ್ಣಾದಿ ದೇವತೆಗಳು ಉತ್ತರ ಭಾರತದಲ್ಲಿ ಜನಿಸಿದರು. ತುಲಸೀದಾಸ, ಸೂರದಾಸ, ತಮ್ಮದೇ ಆದ ವಿಶಿಷ್ಟರೀತಿಯಲ್ಲಿ ಧರ್ಮದ ಹೆಸರಿನಲ್ಲಿ ಸಾಹಿತ್ಯ ಸೃಷ್ಟಿಸಿ, ನಿರಾಡಂಬರ ಜೀವನ ನಡೆಸಿ ಧರ್ಮಮಾರ್ಗದಲ್ಲಿ ನಡೆದು ಒಂದು ಉಚ್ಚ ಸಂಸ್ಕೃತಿಯ ಪರಂಪರೆಯನ್ನು ನಮ್ಮ ಮುಂದಿರಿಸಿದ್ದಾರೆ. ಭಾರತದಲ್ಲಿ ಬೌದ್ಧ ಧರ್ಮದ ಪ್ರಭಾವ ಕಡಮೆಯಾಗಿ ನಾಸ್ತಿಕತೆ ಅರಾಜಕತೆ ತಲೆಯೆತ್ತಿದ ಸಮಯ, ದಕ್ಷಿಣದ ಕಾಲಡಿಯಲ್ಲಿ ಶಂಕರಾಚಾರ್ಯರು ಜನ್ಮವೆತ್ತಿ ಅದ್ವೈತ ಮತಸ್ಥಾಪನೆಗೈದರು. ಆ ಮೇಲೆ ಶ್ರೀ ರಾಮಾನುಜಾಚಾರ್ಯರು ಶ್ರೀ ಪೆರಂಬುದೂರಿನಲ್ಲಿ ಜನ್ಮವೆತ್ತಿ ವಿಶಿಷ್ಟಾದ್ವೈತ ಮತವನ್ನು ಪ್ರಚಾರ ಮಾಡಿದರು.

"ರಜತ ಪೀಠ ಕುಮಾರಾದ್ರಿ ಕುಂಭಾಸೀಚದ್ರಜೇಶ್ವರು
ಕ್ರೋಢ ಗೋಕರ್ಣ ಮೂಕಾಂಬಾಃ
ಸಪ್ತೈತಾ ಮೋಕ್ಷದಾಯಕಃ"

ಮೇಲೆ ಹೇಳಿದ ಶ್ಲೋಕದಲ್ಲಿ ಬರುವ ಪರಶುರಾಮ ಕ್ಷೇತ್ರದಲ್ಲಿರುವ 7 ಮೋಕ್ಷದಾಯಕವಾದ ಕ್ಷೇತ್ರಗಳಲ್ಲಿ ಶ್ರೀ ಕ್ಷೇತ್ರ ಗೋಕರ್ಣ ಉತ್ತರ ಕರ್ನಾಟಕದಲ್ಲಿದೆ. ಉಳಿದ ಆರು ಕ್ಷೇತ್ರಗಳಾದ ಉಡುಪಿ, ಸುಬ್ರಹ್ಮಣ್ಯ, ಕುಂಭಾಸಿ, ಕೋಟೇಶ್ವರ, ಶಂಕರನಾರಾಯಣ ಮತ್ತು ಕೊಲ್ಲೂರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿವೆ. ಈ ಕರಾವಳಿ ಪ್ರದೇಶದಲ್ಲಿ ಭೂಮಾತೆ ಯಾವಾಗಲೂ ಹಸುರಾಗಿ ಸುಪ್ರಸನ್ನೆಯಾಗಿದ್ದಾಳೆ. ತೀರ್ಥರಾಜನಾದ ಸಮುದ್ರ ರಾಜ ಈಕೆಯ ಪಾದವನ್ನು ತೊಳೆಯುತ್ತಿದ್ದರೆ ಈಕೆಯ ತಲೆಯಲ್ಲಿ ಪಶ್ಚಿಮ ಘಟ್ಟದಲ್ಲಿ ಹುಟ್ಟಿದ ಅನೇಕ ಪುಣ್ಯ ನದಿಗಳು ಈಕೆಯ ಶಿರ ಮತ್ತು ದೇಹಗಳನ್ನು ಶುದ್ಧಮಾಡಿ, ತಮ್ಮ ಪತಿಯ ಮನೆಯನ್ನು ತಾಯಿಯ ಪಾದದ ಮೂಲಕ ಸೇರುತ್ತವೆ. ಈ ಜೀವನದಿಗಳ ಜಲಸಂಪತ್ತಿನಿಂದಾಗಿ ಭೂಮಾತೆ ಪ್ರಸನ್ನ ಪಚ್ಚೆವರ್ಣ ತಾಳಿದ್ದಾಳೆ. ಎಲ್ಲಿ ನೋಡಿದರೂ ಫಲ ಭರಿತವಾದ ಮಾವು, ಕೌಂಗು, ಹಲಸು ತೆಂಗು, ಕದಳೀ ವೃಕ್ಷಗಳನ್ನು ನೋಡಬಹುದು. ದೇವರಿಗೆ ಪ್ರಿಯವಾದ ಜಾಜಿ, ಮಲ್ಲಿಗೆ, ಸಂಪಿಗೆ, ಪಾರಿಜಾತ, ಕೇದಗೆ, ಕಮಲ, ಗುಲಾಬಿ, ಕರವೀರ ಪುಷ್ಪಗಳು ತುಳಸಿ, ಬಿಲ್ವ ಪತ್ರಗಳು ತಮ್ಮ ಕಮನೀಯವಾದ ಕಂಪನ್ನು ಬೀರಿದ ನಾಡು. ಇಲ್ಲಿ ಊರಿಗೊಂದು ದೇವಾಲಯ, ಮಠ, ಭೂತಾಲಯ ತುಂಬಿ ಕಾಣುತ್ತವೆ. ಎಲ್ಲಾ ಮತೀಯರು ಪರಸ್ಪರ ಸೌಹಾರ್ದದಿಂದಿದ್ದಾರೆ. ಇಲ್ಲಿ ಕೆರೆ ಬಾವಿಗಳು, ಕೇವಲ ದೇವಾಲಯಗಳಲ್ಲದೇ ಹೆಚ್ಚಿನ ಮನೆಗಳು ಕೂಡಾ ಇವೆ. ಉಳುವ ಹೊಲ ಮಾತ್ರವಲ್ಲದೆ ಹೆಚ್ಚಿನವರಿಗೆ ತಂಗಾಳಿ ಬೀಸುವ ತೋಟಗಳೂ ಕೂಡಾ ಇವೆ. ಇಂತಹ ಪಾವನ ಭೂಮಿಯಲ್ಲಿ ಇಬ್ಬರು ಯತಿಪುಂಗವರು ಜನ್ಮವೆತ್ತಿ ಈ ಪರಿಸರದ ಸರ್ವತೋಮುಖ ಅಭಿವೃದ್ಧಿಗೆ ಕಾರಣಭೂತರಾಗಿದ್ದಾರೆ. ಈ ಪುಣ್ಯ ಪುರುಷರ ಪರಿಚಯ ಮಾಡಿಸುವುದೇ ಈ ಕಿರುಲೇಖನದ ಉದ್ದೇಶ.

**ಶ್ರೀ ಎಸ್. ಕೆ. ಆಚಾರ್**

ಈ ಯತಿದ್ವಯರ ಪೈಕಿ ಮೊದಲನೆಯವರಾದ ಆಚಾರ್ಯ ಮಧ್ವರು ಮತತ್ರಯಾಚಾರ್ಯರ ಪೈಕಿ ಒಬ್ಬರು. ಇವರು ಕ್ರಿ.ಶ. 1238 ರಲ್ಲಿ ಉಡುಪಿ ತಾಲ್ಲೂಕಿನ ಕುಂಜಾರುಗಿರಿಯ ಸಮೀಪದ ಪಾಜಕ ಕ್ಷೇತ್ರದಲ್ಲಿ ಜನಿಸಿದರು. ಇವರ ತೀರ್ಥರೂಪರ ಹೆಸರು ಮಧ್ಯಗೇಹಭಟ್ಟರು. ಇವರ ಮಾತೆಯ ಹೆಸರು ವೇದವತಿ. ವೈದಿಕವಲಯಗಳಲ್ಲಿ ಶ್ರೀ ಶಂಕರಾಚಾರ್ಯರು ಈಶ್ವರನ ಅವತಾರವೆಂದೂ ಶ್ರೀರಾಮಾನುಜಾಚಾರ್ಯರು ಆದಿಶೇಷನ ಅವತಾರವೆಂತಲೂ, ಶ್ರೀ ಮಧ್ವಾಚಾರ್ಯರು ಆಂಜನೇಯನ ತೃತೀಯ ಅವತಾರವೆಂದೂ ಶಾಸ್ತ್ರಬದ್ಧವಾಗಿ ನಂಬಲ್ಪಟ್ಟಿದೆ. ಇವರ ಜೀವನವನ್ನು ಕೃತಿಯನ್ನು ಉಪದೇಶವನ್ನು ನೋಡುವಾಗ, ಇವರಲ್ಲಿ ಒಬ್ಬ ಮಹಾಪುರುಷನಲ್ಲಿ ಅದರಲ್ಲೂ ಒಬ್ಬ ಯತಿ ಶೇಖರನಲ್ಲಿರಬೇಕಾದ ಅಪಾರ ಜ್ಞಾನ ಮತ್ತು ದಯಾಗುಣಗಳನ್ನು ನಾವು ಕಾಣಬಹುದು.



ಇವರು ತಮ್ಮ ಆರಾಧ್ಯದೈವವಾದ ಶ್ರೀ ಕೃಷ್ಣ ದೇವರನ್ನು ಪ್ರಥಮಸಪ್ತ ಕ್ಷೇತ್ರವಾದ ಶ್ರೀ ಕ್ಷೇತ್ರ ಉಡುಪಿಯಲ್ಲಿ ಪ್ರತಿಷ್ಠೆ ಮಾಡಿದರು. ಇವರು ಧ್ಯಾನಾಸಕ್ತರಾಗಿ, ಸಮುದ್ರದಡದಲ್ಲಿ ಮಲ್ಪೆಯಲ್ಲಿ ಕುಳಿತಾಗ ಬಿರುಗಾಳಿಗೆ ಸಿಲುಕಿ ಮುಳುಗಲು ಸನ್ನದ್ಧವಾದ ಹಡಗನ್ನು ಕೇವಲ ತಮ್ಮ ಕಾವಿಶಾಟಿಯನ್ನು ಅಲ್ಲಾಡಿಸಿ, ಸುರಕ್ಷಿತವಾಗಿ ದಡ ಸೇರುವಂತೆ ಮಾಡುತ್ತಾರೆ. ಇದರಿಂದ ಆನಂದಗೊಂಡ ಹಡಗಿನ ಮಾಲಕನು ತಮಗೇನು ಬೇಕೆಂದು ಕೇಳಲು, ಆಚಾರ್ಯ ಮಧ್ವರು ಆ ಹಡಗಿನಲ್ಲಿರುವ ಕೇವಲ ಎರಡು ಗೋಪಿಚಂದನದ ಹೆಂಜೆಗಳನ್ನು ಸ್ವೀಕರಿಸುವರು. ಈ ಹೆಂಜೆಯಲ್ಲಿ ಅಡಕ

ಫೆಬ್ರುವರಿ ತಿಂಗಳಿನಲ್ಲಿ ದೇಶಾದ್ಯಾಂತ "ಮಧ್ವ ನವಮಿ" ಉತ್ಸಾಹ, ಸಂಭ್ರಮಗಳಿಂದ ಆಚರಿಸಲಾಗುತ್ತದೆ. ದ್ವೈತತತ್ತ್ವ ಪ್ರತಿಪಾದಕರಾದ ಮಧ್ವಾಚಾರ್ಯರ ಹೆಸರು ಭಾರತೀಯ ತತ್ತ್ವಶಾಸ್ತ್ರದ ಇತಿಹಾಸದಲ್ಲಿ ಪ್ರಖ್ಯಾತ. ಅವರ ನೆನಪಿನಲ್ಲಿ ಈ ಲೇಖನ.

ವಾಗಿದ್ದ ಬಲರಾಮ ದೇವರನ್ನು ಮಲ್ಪೆಯ ವಡಭಾಂಡೇಶ್ವರದಲ್ಲಿ ಪ್ರತಿಷ್ಠೆ ಮಾಡಿ ಇನ್ನೊಂದು ಹೆಂಜೆಯಲ್ಲಿದ್ದ ಶ್ರೀ ಕೃಷ್ಣನನ್ನು ಉಡುಪಿಯಲ್ಲಿ ಪ್ರತಿಷ್ಠೆ ಮಾಡಿದರು. ಇದು ಆಚಾರ್ಯರ ಅಪರೋಕ್ಷ ಜ್ಞಾನವನ್ನೂ, ಆಪತ್ತಿಗೆ ಸಿಲುಕಿದವರ ಮೇಲಿನ ಅನುಕಂಪ ದೃಷ್ಟಿಯನ್ನೂ ತೋರಿಸುತ್ತದೆ.

ಇವರು ತನಗೆ ಪಾಠಹೇಳಿದ ಗುರುವಿಗೆ ನೀರಿನ ಬರತಪ್ಪಿಸಲು ತಮ್ಮ ದಂಡವನ್ನು ಕೆರೆದು ಒಂದು ಕೆರೆಯನ್ನು ನಿರ್ಮಾಣಮಾಡಿದರು. ಈ ಕೆರೆಯನ್ನು ಇವತ್ತಿಗೂ ಕಾಪುವಿನ ಸಮೀಪದ ದಂಡ ತೀರ್ಥದಲ್ಲಿ ನಾವು ನೋಡಬಹುದು. ಇವರ ಅಪಾರ ಧಾರ್ಮಿಕ ಮತ್ತು ಲೌಕಿಕ ಪ್ರಜ್ಞೆಯನ್ನು ಕಂಡು ಜನರು ಇವರನ್ನು ಪೂರ್ಣಪ್ರಜ್ಞರು, ಆನಂದತೀರ್ಥರು, ಸರ್ವಜ್ಞಾಚಾರ್ರು, ಎಂದು ಮುಂತಾಗಿ ಕರೆಯುತ್ತಾರೆ. ಇವರ ಸಿದ್ಧಾಂತದ ಪ್ರಕಾರ ಆತ್ಮ ಪರಮಾತ್ಮ ಬೇರೆ. ಸಂಸಾರದ ಸಂಕಷ್ಟಗಳಿಂದ ಪಾರಾಗಲು ಮನುಷ್ಯರು ದೇವರ ಪಾದಗಳನ್ನು ನಂಬಿ, ತಮ್ಮ ಕರ್ತವ್ಯಗಳನ್ನು ಮಾಡಬೇಕೆಂದು ತಿಳಿಸಿದ್ದಾರೆ. ಜನತಾ ಸೇವೆಯೇ ಜನಾರ್ದನ ಸೇವೆ ಎಂದಿದ್ದಾರೆ. ಹೀಗಾಗಿ ಇವರ ಅನುಯಾಯಿಗಳಲ್ಲಿ ದೀನದಲಿತರ ಸೇವೆ ಮತ್ತು ಉತ್ಕರ್ಷಕ್ಕೆ ತುಂಬಾ ಮಹತ್ವವಿದೆ. ಇವರು ರಾಮೇಶ್ವರದಿಂದ ಬದರಿವರೆಗೆ ಭಾರತದ ಸಂಚಾರ ಮಾಡಿದ್ದಾರೆ. ಇವರು ಬರೆದ 37 ಗ್ರಂಥಗಳು ಸರ್ವಮೂಲಗಳೆಂದು ಪ್ರಸಿದ್ಧವಾಗಿವೆ. ಇವರು ಇತರ ಆಚಾರ್ಯರಂತೆ ಬ್ರಹ್ಮಸೂತ್ರ, ಭಗವದ್ಗೀತೆ, ಮಹಾಭಾರತಗಳಿಗೆ ಟಿಪ್ಪಣಿ ಬರೆದಿದ್ದಾರೆ.

ಉಡುಪಿಯಲ್ಲಿ ಶ್ರೀಕೃಷ್ಣದೇವರ ಪೂಜೆ ನಿರಂತರವಾಗಿ ನಡೆಯಲು ಆಚಾರ್ಯರು 8 ಜನ ಬಾಲಯತಿಗಳನ್ನು 2 ತಿಂಗಳಿಗೊಮ್ಮೆ ಪೂಜಿಸಲು ನಿಯುಕ್ತಗೊಳಿಸಿದರು. ಭೂವೈಕುಂಠವಾದ ಶ್ರೀ ಕ್ಷೇತ್ರ ಉಡುಪಿ ಇಂದಿಗೂ ಸಾವಿರಾರು ಭಕ್ತರನ್ನು ಆಕರ್ಷಿಸುವ ಕೇಂದ್ರವಾಗಿದೆ. ಶ್ರೀ ಮಧ್ವಚಾರ್ಯರು ಯಾಗದಲ್ಲಿ ಪ್ರಾಣಿ ಬಲಿಗೆ ಬದಲಾಗಿ, ಹಿಟ್ಟಿನ ಪ್ರಾಣಿ ನಿರ್ಮಿಸಿ ಬಲಿ ಕೊಡುವ ಸಂಪ್ರದಾಯವನ್ನು ತಂದರು. ಇದು ಆಚಾರ್ಯರ ಅಹಿಂಸಾ ಪ್ರಜ್ಞೆಯ ದ್ಯೋತಕವಾಗಿದೆ. ಇನ್ನು ಭಕ್ತಿಯ ಕುರುಹಾಗಿ ಏಕಾದಶಿಯಂದು "ಲಂಘನಂ ಪರಮೌಷಧಂ" ಎಂಬ ಮಾತಿನಂತೆ ಹದಿನೈದು ದಿನಗಳಿಗೊಮ್ಮೆ ಮಾಡುವ ಈ ಉಪವಾಸವು ಆಹಾರ ವಸ್ತುಗಳ ಮಿತವ್ಯಯವೂ ಹೌದು; ನಮ್ಮ ಆರೋಗ್ಯಕ್ಕೂ ಹಿತಕರ.

ಇವರ ಮೂಲ ಗ್ರಂಥಗಳು ಕನ್ನಡ ಮತ್ತು ಇಂಗ್ಲೀಷ್‌ಗಳಿಗೆ ಭಾಷಾಂತರಗೊಂಡಿವೆ. ಇವರ ಶಿಷ್ಯರಾದ ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ಪುರಂದರದಾಸರು, ಕನಕದಾಸರು, ಮತ್ತು ಶ್ರೀರಾಘವೇಂದ್ರರು ಕನ್ನಡದಲ್ಲಿ ವಿಪುಲವಾದ ದಾಸಸಾಹಿತ್ಯ ನಿರ್ಮಾಣಮಾಡಿ, ಜನಸಾಮಾನ್ಯರಿಗೆ ದ್ವೈತದರ್ಶನ ಮಾಡಿಸಿದ್ದಾರೆ. ಇವರು ಉಡುಪಿಯ ಅನಂತೇಶ್ವರದಲ್ಲಿ ಪಾಠ ಹೇಳುತ್ತಿದ್ದಂತೆ ತಮ್ಮ 79ನೆಯ ವಯಸ್ಸಿನಲ್ಲಿ ಬದರಿಗೆ ತೆರಳಿದರು. ಇವರು ದೃಶ್ಯರಾಗಿ ಬದರಿಯಲ್ಲೂ ಅದೃಶ್ಯರಾಗಿ ಉಡುಪಿಯಲ್ಲಿದ್ದಾರೆಂತಲೂ ವೈದಿಕವಲಯದ ನಂಬಿಕೆ. ಎಂತಲೇ ಇವರು ನಿರ್ಯಾಣವಾದ ಸ್ಥಳಕ್ಕೇನೇ ದೇವರ ತೀರ್ಥ, ಗ್ರಂಥ ನಿರ್ಮಾಲ್ಯ ಅರ್ಪಿಸಿ, ಮಂಗಳಾರತಿ ಮಾಡುವ ಪರಿಪಾಠವನ್ನು ನಾವು ಉಡುಪಿಯಲ್ಲಿ ಗಮನಿಸಬಹುದು.

ದಕ್ಷಿಣ ಕನ್ನಡದ ಇನ್ನೊಬ್ಬ ಶ್ರೇಷ್ಠ ಮುನಿಪುಂಗವರೆಂದರೆ ಶ್ರೀ ರಾಮಾಚಾರ್ಯ ಮತ್ತು ಸರಸ್ವತಿ ದಂಪತಿಗಳ ಸುಪುತ್ರನಾಗಿ ಕುಂಭಾಸಿಯ ಸಮೀಪದ ಹೂವಿನಕೆರೆಯಲ್ಲಿ ಜನ್ಮವೆತ್ತಿದ ದ್ವೈತಮತ ಪ್ರವರ್ತಕಚಂದ್ರಮರಾದ ಶ್ರೀ ವಾದಿರಾಜತೀರ್ಥರು. ಇವರು ಕ್ರಿ.ಶ. 1480 ರಲ್ಲಿ ಜನ್ಮವೆತ್ತಿದರು. ಅವರು ಹುಟ್ಟಿ ಇಂದಿಗೆ 500 ವರ್ಷಗಳಾದರೂ, ಜನರು ಅವರನ್ನು ಅವರ ಕೃತಿಗಳನ್ನು ಮರೆತಿಲ್ಲ. ಅವರ ಕೃತಿಗಳು ಚಿರನೂತನವಾಗಿ, ಅಮರವಾಗಿವೆ. 1980ನೇ ವರ್ಷವನ್ನು ಅವರ ಜನ್ಮ ಪಂಚಶತಾಬ್ದಿಯಾಗಿ ಭಾರತಾದ್ಯಂತ ಆಚರಿಸಲಾಯಿತು. ಇವರು ಜನಸಾಮಾನ್ಯರ ಉತ್ಕರ್ಷಕ್ಕಾಗಿ ಏನು ಮಾಡಿದರೆಂಬುದನ್ನು ಕೊಂಚ ತಿಳಿಯೋಣ.

ಶ್ರೀ ವಾದಿರಾಜರು ಕ್ರಿ. ಶ. 1480 ರಿಂದ ಕ್ರಿ. ಶ. 1600 ರವರೆಗೆ ಬಾಳಿದರು. ಇವರು ಸಂಸ್ಕೃತದಲ್ಲಿ ಮಾತ್ರವಲ್ಲದೆ, ಕನ್ನಡದಲ್ಲಿ ಕೂಡಾ ಅನೇಕ ಗ್ರಂಥಗಳನ್ನು ರಚಿಸಿ ಜನಸಾಮಾನ್ಯರಿಗೆ ತುಂಬಾ ಉಪಕಾರ ಮಾಡಿದ್ದಾರೆ. ಇವರು ಯತಿಯಾಗಿ ಕೇವಲ ಜಪ ಪೂಜೆ ಅಂತ ಮಠದ ನಾಲ್ಕು ಗೋಡೆಯ ಒಳಗೆ ನಿಲ್ಲದೆ ಜನಸಾಮಾನ್ಯರ ಹೃದಯವನ್ನು ಸೂರೆಗೊಂಡರು. ಇವರು ಬರೆದ ತೀರ್ಥ ಪ್ರಬಂಧವೆಂಬ ಸಂಸ್ಕೃತಗ್ರಂಥ ಈಗ ಕನ್ನಡ ಮತ್ತು ಇಂಗ್ಲಿಷ್‌ಗೆ ಅನುವಾದಗೊಂಡಿದೆ. ಈ ಗ್ರಂಥದ ಒಂದು ಎಳೆ ಶಾಸ್ತ್ರವಾದರೆ ಇನ್ನೊಂದೆಳೆ ಕಾವ್ಯ ಹಾಗೂ ಭಾರತದ ನದೀನದ, ಸಂಸ್ಕೃತಿ ಮತ್ತು ದೈವದರ್ಶನ. ಅವರು ಅಲ್ಲಿ ಮಾಡಿರುವ ನಿಸರ್ಗ ವರ್ಣನೆ, ಪ್ರದರ್ಶಿಸಿದ ಭಕ್ತಿ ಅದ್ಭುತ ರಮ್ಯ. ಇದನ್ನು ಓದಿಯೇ ಆನಂದಿಸಬೇಕು. ಇದನ್ನು ಅವರು ಪೂರ್ವ ಪಶ್ಚಿಮ, ಮತ್ತು ದಕ್ಷಿಣ ಉತ್ತರ ಪ್ರಬಂಧಗಳೆಂದು 4 ವಿಭಾಗಗಳಾಗಿ ಮಾಡಿದ್ದಾರೆ. ಇದು ಪ್ರವಾಸ ಸಾಹಿತ್ಯ ಮಾಲೆಯ ಶಿರೋಮಣಿ.

ಶ್ರೀ ವಾದಿರಾಜರನ್ನು ದಕ್ಷಿಣ ಕನ್ನಡದಲ್ಲಿ ಗುರುರಾಜರು ಮತ್ತು ರಾಜರು ಎಂದು ಕೂಡಾ ಕರೆಯುತ್ತಾರೆ. ಶ್ರೀ ರಾಜರು ಮಾಡಿದ ಇನ್ನೊಂದು ಮಹತ್ಕಾರ್ಯವೆಂದರೆ ಉಡುಪಿ ಅಷ್ಟ ಮಠಗಳಲ್ಲಿ ಎರಡು ತಿಂಗಳಿಗೊಮ್ಮೆ ನಡೆಯುತ್ತಿದ್ದ ಪರ್ಯಾಯ ಪೂಜಾವ್ಯವಸ್ಥೆಯನ್ನು ಎರಡು ವರ್ಷಗಳಿಗೊಮ್ಮೆ ಪರಿವರ್ತಿಸಿದರು. ಇದರಿಂದಾಗಿ ಒಮ್ಮೆ ಪರ್ಯಾಯವಾದ ಬಳಿಕ ಪ್ರತಿ ಸ್ವಾಮಿಗಳಿಗೆ ಧರ್ಮಪ್ರಸಾರ, ತೀರ್ಥಯಾತ್ರೆಗೆ 14 ವರ್ಷದಷ್ಟು ಸಮಯ ಸಿಗುತ್ತದೆ.

ಕರುಣಾಳು ವಾದಿರಾಜರು ಮಾಡಿದ ಇನ್ನೊಂದು ಕೆಲಸವೆಂದರೆ ಉಡುಪಿಯ ಸಮೀಪದ ಮಟ್ಟಿನ ಗ್ರಾಮದ ಬಡ ರೈತರಿಗೆ ಜೀವನೋಪಾಯಕ್ಕಾಗಿ ಸ್ವಾದಿಷ್ಟ ಬೀಜಗಳನ್ನಿತ್ತು ಗುಳ್ಳ ಬೆಳೆಸುವ ಉಪವೃತ್ತಿ ತೋರಿಸಿ ಕೊಟ್ಟಿದ್ದು. ಈ ಗುಳ್ಳಗಳು ದಕ್ಷಿಣ ಕನ್ನಡದಲ್ಲಿ ಇಂದಿಗೂ ಲಭ್ಯವಾಗಿದ್ದು

ಇವುಗಳ ರುಚಿ, ಬೇರೆ ಗುಳ್ಳಗಳಿಂದ ಬಹಳ ಮೇಲ್ಮಟ್ಟದ್ದು. ಇದು ಇಂದಿಗೂ ನಾಲಿಗೆಗೆ ಗೋಚರವಾಗುವ ಸಂಗತಿ. ಹೋದ ವರ್ಷ 29-1-1980 ರಂದು ಉಡುಪಿಯಲ್ಲಿ ನಡೆದ ಶ್ರೀ ರಾಜರ ಜನ್ಮ ಪಂಚಶತಾಬ್ದಿ ಉತ್ಸವದಂದು ಮಟ್ಟು ಗ್ರಾಮದ ರೈತರು ತಮ್ಮ ಕೃತಜ್ಞತೆಯ ದ್ಯೋತಕವಾಗಿ, ತಲೆಯಲ್ಲಿ ಮಟ್ಟಿಗುಳ್ಳಗಳನ್ನು ಹೊತ್ತು ತಂದು ಶ್ರೀ ರಾಜರ ಕಾರ್ಯಕ್ಷೇತ್ರವಾದ ಉಡುಪಿಯಲ್ಲಿ ಅರ್ಪಿಸಿದ್ದು ಗಮನಾರ್ಹವಾದ ಅಂಶ. ತುಳುನಾಡಿನ ಯತಿಗಳಾದ ರಾಜರು ಸಂಸ್ಕೃತ ಕನ್ನಡ ಮಾತ್ರವಲ್ಲದೆ ರೈತಾಪಿ ಜನರ ಉದ್ಧಾರಕ್ಕಾಗಿ, ತುಳುವಿನಲ್ಲಿ ದಶಾವತಾರ ಪದ್ಯವನ್ನು ಮಾರ್ಮಿಕವಾಗಿ ಹಾಡಿದ್ದಾರೆ. ಯುಕ್ತಿ ಮಲ್ಲಿಕಾ, ರುಕ್ಮಿಣೀಶ ವಿಜಯ, ಲಕ್ಷ್ಮಾಭರಣ, ಇವರು ರಚಿಸಿದ ಸಂಸ್ಕೃತ ಉದ್ಗ್ರಂಥಗಳು.

ಈಗ ಪ್ರಪಂಚದಲ್ಲಿ ಮಾನವರಲ್ಲಿ ಪರಸ್ಪರ ಈರ್ಷ್ಯೆ, ದ್ವೇಷ ಹೆಚ್ಚುತ್ತೊಡಗಿದೆ. ಸಹೃದಯತೆ ಕಡಿಮೆ ಆಗುತ್ತಿದೆ. ಪ್ರಪಂಚದಲ್ಲಿ ನಡೆಯುವ ಅನೇಕ ಕಷ್ಟ ನಷ್ಟಗಳಿಗೆ ಈರ್ಷ್ಯೆ ಅಸಹನೆಗಳೇ ಕಾರಣ. ಈ ಅಣುಬಾಂಬಿನ ಯುಗದಲ್ಲಂತೂ, ಪ್ರಪಂಚದ ಒಂದು ಭಾಗವನ್ನು ಇನ್ನೊಂದು ಭಾಗವು ಕ್ಷಣ ಮಾತ್ರದಲ್ಲಿ ನಾಶಮಾಡಬಲ್ಲದು. ಆದ್ದರಿಂದ ಇಂದು ವಿಜ್ಞಾನದ ಮುನ್ನಡೆಯಿಂದ ನಾವೆತ್ತ ಸಾಗುತ್ತಿದ್ದೇವೆಂದು ನಮಗೆ ತಿಳಿಯದಾಗಿದೆ. ತಾಳುವಿಕೆಯೇ ಕಲಿಯುಗದ ದೊಡ್ಡ ತಪಸ್ಸು. ಎಂದು ಶ್ರೀರಾಜರು ಹೇಳುತ್ತಾರೆ. ಅದನ್ನು ಅವರ ಮಾತಿನಲ್ಲೇ ಕೇಳುವ;

(ಕಾಂಭೋದಿರಾಗ—ಝಂಪೆತಾಳ)

ತಾಳುವಿಕೆಗಿಂತನ್ಯ ತಪವಿಲ್ಲ, ಕೇಳಬಲ್ಲವರಿಗೆ
  ಹೇಳುವೆನು ಸೊಲ್ಲ,
ದುಷ್ಟ ಮನುಜರು ಪೇಳ್ವ, ನಿಷ್ಠುರುದ ನುಡಿ
  ತಾಳು,
ಕಷ್ಟ ಬಂದಾಗ ನೀ ಕಂಗೆಡದೆ ತಾಳು,
ನೆಟ್ಟ ಸಸಿ ಫಲ ಬರುವ ತನಕ ಶಾಂತಿಯ ತಾಳು
ಕಟ್ಟುಬುತ್ತಿಯು ಮುಂದೆ ಉಣಲುಂಟು ತಾಳು
ಹಳಿದು ಹಂಗಿಸುವಂತ ಹಗೆಯ ಮಾತನು
  ತಾಳು,
ಸುಳಿನುಡಿ ಕುಹಕ ಕುಮಂತ್ರವನು ತಾಳು,
ಅಳುಕದೆಲೆ ಬಿರುಸು ಬಿಂಕದ ನುಡಿಯ ನೀ
  ತಾಳು,
ಹಲಧರಾನುಜನನ್ನು ಹೃದಯದಲೆ ತಾಳು,
ಉಕ್ಕೊ ಹಾಲಿಗೆ ನೀರನಿಕ್ಕುವಂದದಿ ತಾಳು,
ಪಕ್ಷೀಶ ಹಯವದನ ಶರಣೆಂದು ತಾಳು,

ಶ್ರೀ ರಾಜರ ಆರಾಧ್ಯ ದೈವವಾದ 'ಹಯವದನ' ಮುದ್ರಿಕೆಯನ್ನೊಳಗೊಂಡ ಅವರ ಪದ್ಯಗಳಲ್ಲಿ ಅಪೂರ್ವ ವಾಗ್ವಿಲಾಸವನ್ನು ಒಂದು ವಿಶೇಷ ಮಂತ್ರ ಶಕ್ತಿಯನ್ನು ಗುರುತಿಸಬಹುದು. ಇಂದು ವಿದೇಶೀಯರು ಕೂಡಾ ಆಧ್ಯಾತ್ಮಿಕ ಶಾಂತಿಗಾಗಿ ಭಾರತದತ್ತ ದೃಷ್ಟಿ ಹೊರಳಿಸಿರುವುದನ್ನು ನೋಡಿದರೆ ಅದಲ್ಲದೆ ವಿದೇಶಗಳಲ್ಲಿ ಕೂಡಾ ರಾಮ, ಕೃಷ್ಣ ಶ್ರೀನಿವಾಸ, ಪಾಂಡುರಂಗ ದೇವಾಲಯ ಸ್ಥಾಪನೆ ಮಾಡಿ, ಭಜನೆ ರಥೋತ್ಸವ ಮಾಡಿ ಅಚ್ಚ ಭಾರತೀಯ ಪದ್ಧತಿಯಲ್ಲಿ ಪೂಜೆ, ಅರ್ಚನೆ ಮಾಡುವುದನ್ನು ನೋಡಿದರೆ ಈ ಯತಿದ್ವಯರ ಸಂದೇಶದ ಸರ್ವಕಾಲಿಕ ಸತ್ಯತೆಯ ಸ್ಪಷ್ಟ ಚಿತ್ರಣ ನಮಗೆ ಸಿಗುತ್ತದೆ.

ವಾದಿರಾಜರು ನೃತ್ಯ, ತಾಳ, ಲಯಬದ್ಧವಾಗಿ ದೇವರ ಭಜನೆ ಮಾಡುವ ಪದ್ಧತಿಯನ್ನು ಆರಂಭಿಸಿದರು. ಇದರಿಂದಾಗಿ ಗ್ರಂಥಸ್ಥವಾಗದೆ ಉಳಿದ ದಾಸ ಸಾಹಿತ್ಯ ಕಂಠಸ್ಥವಾಗಿ ಉಳಿದು



ಹರಿದು ಕೊಂಡು ಬಂದು ನಮಗೆ ಅದನ್ನು ಗ್ರಂಥಸ್ಥ ಮಾಡಲು ಅನುಕೂಲವಾಗಿದೆ. ಅದಲ್ಲದೆ ಶ್ರೀ ಕ್ಷೇತ್ರ ತಿರುಮಲೆ ತಿರುಪತಿ ದೇವಸ್ಥಾನದ ಆಡಳಿತ ಮಂಡಲಿಯವರು, ದಾಸಸಾಹಿತ್ಯದ ಪದ್ಯಗಳನ್ನು ದಾಸರ ಜೀವನ ಚರಿತ್ರೆಗಳನ್ನು ಕನ್ನಡ, ತೆಲುಗು, ತಮಿಳು, ಹಿಂದಿ, ಇಂಗ್ಲಿಷ್‌ನಲ್ಲಿ ಭಾಷಾಂತರ ಮಾಡಿ ಪ್ರಸಾರ ಮಾಡುವ ಕಾರ್ಯಕ್ರಮವನ್ನು ಇಟ್ಟುಕೊಂಡು ಅದಕ್ಕಾಗಿ ಒಂದು ಸಲಹಾ ಸಮಿತಿಯನ್ನು ರಚಿಸಿ, ವಿಷಯ ಸಂಗ್ರಹ ಮಾಡುತ್ತಾ ಇದ್ದಾರೆ. ಇದರಿಂದಾಗಿ ದಾಸಸಾಹಿತ್ಯದ ಹಿರಿಮೆಗೆ ಬೇರೆ ನಿದರ್ಶನ ಅಗತ್ಯ ವಿಲ್ಲವೆಂದು ನಾನು ಭಾವಿಸುತ್ತೇನೆ. ನಾವು ಸೂಕ್ಷ್ಮವಾಗಿ ವಿಚಾರಮಾಡಿದರೆ ವಿಶ್ವ ಶಾಂತಿಯ ಬೀಜ ಮಂತ್ರ ಅದರಲ್ಲಿ ಅಡಕವಾಗಿದೆ.

ನೂರಿಪ್ಪತ್ತರಷ್ಟು ಪೂರ್ಣ ಪುರುಷಾಯುಷ್ಯವನ್ನು ಹೊಂದಿದ ರಾಜರು 4 ಪರ್ಯಾಯವನ್ನು ಉಡುಪಿಯಲ್ಲಿ ನಡೆಸಿ ತಮ್ಮ 5ನೆಯ ಪರ್ಯಾಯವನ್ನು ಉಡುಪಿಯಲ್ಲಿ ತಮ್ಮ ಶಿಷ್ಯರಾದ ವೇದವೇದ್ಯ ತೀರ್ಥರಿಂದ ಮಾಡಿಸಿ ತಾವು ಮಾತ್ರ 5ನೆ ಪರ್ಯಾಯವನ್ನು ಶಿರ್ಶಿಯಿಂದ 10 ಮೈಲು ದೂರದಲ್ಲಿರುವ ಸೋದಾಕ್ಷೇತ್ರದಲ್ಲಿ ನೆರವೇರಿಸಿದರು. ಸೋದೆಯಲ್ಲಿ ರಮಾತ್ರಿವಿಕ್ರಮ, ಅನಂತೇಶ್ವರ, ಚಂದ್ರೇಶ್ವರ, ಪ್ರಾಣದೇವರ ಪ್ರತಿಷ್ಠೆ ಮಾಡಿದ್ದಾರೆ ಸ್ನಾನಕ್ಕಾಗಿ ಧವಳ ಗಂಗಾ ಸರೋವರವನ್ನು ನಿರ್ಮಿಸಿರುತ್ತಾರೆ. ಮೂರು ಚಕ್ರದಲ್ಲಿ ನಿಂತ ರಮಾತ್ರಿವಿಕ್ರಮದೇವಸ್ಥಾನ ಬಹಳ ಸುಂದರವಾಗಿದೆ. ಇವರು ಕ್ರಿ.ಶ. 1600ರಲ್ಲಿ ಸಶರೀರ ವೃಂದಾವನ ಪ್ರವೇಶಿಸಿದರು. ಸಶರೀರ ವೃಂದಾವನವಾದವರಲ್ಲಿ ಇವರು ಮೊದಲಿಗರಾದರೆ, ಎರಡನೆಯವರು ಮಂತ್ರಾಲಯದ ಪ್ರಭುಗಳಾದ ಶ್ರೀ ರಾಘವೇಂದ್ರ ತೀರ್ಥರು "ಕಾಮಧೇನು ಯಥಾಪೂರ್ವ ಸರ್ವಾಭೀಷ್ಟ ಫಲಪ್ರದವ್ ತಥಾಕಲೌ ವಾದಿರಾಜೋ ಶ್ರೀ ಪಾದೋಽಭೀಷ್ಟಂಸದಾ" ಅಂದರೆ ತ್ರೇತಾಯುಗದಲ್ಲಿ ಕಾಮಧೇನು ಇದ್ದಂತೆ ಕಲಿಯುಗದ ಕಾಮಧೇನು ವಾದಿರಾಜರು ನಂಬಿದ ಭಕ್ತರನ್ನು ಇಂದಿಗೂ ಅನುಗ್ರಹ ಮಾಡುತ್ತ ಇದ್ದಾರೆ. ಶ್ರೀ ರಾಜರ ಪಂಚವೃಂದಾವನದ ಪಕ್ಕದಲ್ಲಿ ಇವರ ಶಿಷ್ಯರಾದ ಶ್ರೀ ಭೂತರಾಜರ ಗುಡಿ ಇದೆ. ಎಂತಹ ಭೂತ ಉಪದ್ರವವಿದ್ದರೂ ಭೂತರಾಜರ ಎದುರಿನಲ್ಲಿ ನಿಂತು ಬಿಡುತ್ತದೆ. ಇದು ಇಂದಿಗೂ ನಡೆಯುವ ಸಂಗತಿ. ಇಷ್ಟು ಮಾತ್ರವಲ್ಲದೆ ಈ ಪೀಠದಲ್ಲಿ ಬಂದಂತಹ ಯತಿಗಳು ಶಾಲೆ, ಪ್ರೌಢಶಾಲೆ, ಕಲಾಶಾಲೆ ವಿದ್ಯಾರ್ಥಿನಿಲಯ ಅನಾಥಾಶ್ರಮ, ಬಡವರಿಗೆ ಮನೆ, ದೇವಸ್ಥಾನ ನಿರ್ಮಾಣ ಮಾಡಿ ನವಭಾರತ ನಿರ್ಮಾಣದಲ್ಲಿ ಸರಕಾರದೊಂದಿಗೆ ಸಹಕಾರಮಾಡುತ್ತಿರುವುದು ಬಹಳ ಸಂತೋಷದ ವಿಚಾರ. ಯತಿದ್ವಯರ ಜನ್ಮಭೂಮಿ ತುಳುನಾಡು ಕರ್ಮಭೂಮಿ. ಭಾರತದ ಯಶೋಭೂಮಿಯ ಜನಹಿತ ದೃಷ್ಟಿ, ಇಡೀ ವಿಶ್ವ ವಂದ್ಯವೆಂತಲೇ ಇವರು ವಿಶ್ವಮಾನ್ಯರಾದರು.



ನಮ್ಮ ಸಂಸ್ಥೆ

# ಶ್ರೀ ವೆಂಕಟೇಶ್ವರ ಬಾಲಮಂದಿರ

—ಸೀತಾಪ್ರಿಯ

ಹಿಮಗಾಲದ ಚುರುಕು ಬಿಸಿಲಿನ ಹಿತವಾದ ವಾತಾವರಣದಲ್ಲಿ ತಿರುಪತಿ ತಿಮ್ಮಪ್ಪನ ದಿವ್ಯ ಪಾದದಾಶ್ರಯ ಪಡೆದ ಅನಾಥರ ಸನಾಥತೆ ಕಂಡು ಹೃದಯ ಹಿಗ್ಗದಿರದು. ದೇವರು ಅನಾಥರ ರಕ್ಷಕನೆಂಬುದಂತೂ ಇಲ್ಲಿ ನಮಗೆ ಪ್ರತ್ಯಕ್ಷವಾಗುತ್ತದೆ– ಬಾಲಮಂದಿರ ಎಂಬ ಆವರಣ ಪ್ರವೇಶಿಸುತ್ತಿದ್ದಂತೆಯೇ;

ಆ ಒಂದು ಫಲಕ ಇಂಗ್ಲಿಷಿನಲ್ಲಿ ಆ ಆವರಣದ ಕಳೆಯನ್ನು ಹೆಚ್ಚಿಸುತ್ತಿದೆ. "WATCH"ಎಂಬ ಐದು ಅಕ್ಷರಗಳ ಪ್ರತ್ಯಕ್ಷರ ವಿವರಗಳನ್ನು ತಿಳಿಸುವ ಆ ಫಲಕ ಆಧುನಿಕ ಸಂಕ್ಷಿಪ್ತ ಭಗವದ್ಗೀತೆಯಂತೆ–

"Watch your Words, your Actions, your Thoughts, your Character, your Heart"

ಮಾತು, ಕೃತಿ, ಆಲೋಚನೆ, ಆಚಾರ ಮತ್ತು ಹೃದಯವಂತಿಕೆಗಳನ್ನು ಕುರಿತು ಆಡಿರುವ ಈ ಮಾತು ಎಂಥವರನ್ನೂ ಮುಗ್ಧರನ್ನಾಗಿಸುತ್ತದೆ.

ಅತ್ಯಂತ ಲವಲವಿಕೆಯಿಂದ ಓಡಾಡುತ್ತ ನಲಿದಾಡುವ ಆ ಬಾಲಕ ಬಾಲಿಕೆಯರನ್ನು ಕಂಡರೆ ಮನಸ್ಸಿಗೆ ಎಂದಿಲ್ಲದ ಎಲ್ಲಿಲ್ಲದ ಆನಂದ. ಸುಪ್ರಭಾತದ ದಿವ್ಯ ವಾಕ್ಯಗಳಿರುವ ಸಿಮೆಂಟಿನ ಫಲಕಗಳು ಅವರನ್ನು ಅಡಿಗಡಿಗೆ ದೈವಸಾನ್ನಿಧ್ಯದ ದಿವ್ಯ ನೆನಹಿಗೆ ತರುತ್ತಿವೆ. "ವಿನಾ ವೆಂಕಟೇಶಂ ನ ನಾಥೋ ನ ನಾಥಃ। ಸದಾ ವೆಂಕಟೇಶಂ ಸ್ಮರಾಮಿ ಸ್ಮರಾಮಿ" ಎಂಬುವ ಈ ಮಾತಿನ ಅರ್ಥ ಚಿಣ್ಣರಿಗೆಲ್ಲ ಗೊತ್ತಿದೆ. ಈ ಚಿಣ್ಣರು ಇಲ್ಲಿ ಪಡೆಯುವ ವಿದ್ಯಾಭ್ಯಾಸ ಅವರು ಮುಂದೆ ಸಭ್ಯ ನಾಗರಿಕರಾಗಲು ಅತಿಸುಲಭ ಮಾರ್ಗದರ್ಶಿ ಎಂದೆನ್ನಬಹುದು.

1943ರಲ್ಲಿ ಅಂದಿನ ದೇವಸ್ಥಾನದ ಅಧಿಕಾರಿಗಳಾಗಿದ್ದ ಶ್ರೀ ಸಿ. ಅಣ್ಣಾರಾವ್ ಅವರಿಂದ ಜಾತ್ಯತೀತ ಆಧಾರದ ಮೇಲೆ ರೂಪಿತವಾಗಿ ವರ್ಷ 37ಗಳ ಅನಂತರವೂ ಅದೇ ಅಭಿಪ್ರಾಯದ ಮೇಲೆ ಇಂದು ಸಹ ಸುಮಾರು 200 ಬಾಲಕ ಬಾಲಿಕೆಯರಿಗೆ ಆಶ್ರಯ ನೀಡಿ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿರುವ ಈ ಆದರ್ಶ ವಿದ್ಯಾರ್ಥಿನಿಲಯ ತಿರುಪತಿಯ ತಿಮ್ಮಪ್ಪನ ಹಣದ ಸದ್ವಿನಿಯೋಗಕ್ಕೆ ಪ್ರತ್ಯಕ್ಷ ಸಾಕ್ಷಿಯಂತಿದೆ. ಈ ವಿದ್ಯಾರ್ಥಿನಿಲಯಕ್ಕೆ ಸೇರಲು ಬರುವವರು ಅನಾಥ ಮಕ್ಕಳು. ಅವರ ಯೋಗಕ್ಷೇಮ ದೇವಾಲಯದ ಅಧಿಕಾರಿಗಳದ್ದು.

37 ದೀರ್ಘ ವಸಂತಗಳನ್ನು ದಾಟಿ ಬಂದಿರುವ ಈ ಸಂಸ್ಥೆ ಪ್ರತಿ ಮಾಹೆ ಸುಮಾರು ಹತ್ತು ಸಾವಿರ ರೂಪಾಯಿಗಳನ್ನು ವೆಚ್ಚಿಸುತ್ತಲಿದೆಯಲ್ಲದೆ ಭಾರತದ ಮುಂದಿನ ನಾಗರಿಕರ ಭವ್ಯ ನಿರ್ಮಾಣ ಕಾರ್ಯದಲ್ಲಿ ಕೂಡ ತಲ್ಲೀನವಾಗಿದೆ.

## ವಯೋಮಿತಿ

ಸುಮಾರು 6 ರಿಂದ 9 ವರ್ಷದೊಳಗಿನ ಅನಾಥ ಬಾಲಕ ಬಾಲಿಕೆಯರು ಇಲ್ಲಿ ಪ್ರವೇಶಕ್ಕೆ ಅರ್ಹರು. (ಬಾಲಿಕೆಯರಿಗೆ 5 ರಿಂದ 8 ವರ್ಷಗಳ ವಯೋಮಿತಿ ಇದೆ). ಗರಿಷ್ಠ 21 ವರ್ಷ ವಯದವರೆಗಿನ ಯುವಕಯುವತಿಯರಿಗೂ ಇಲ್ಲಿ ಆಶ್ರಯವುಂಟು. ಈಗ ಇಲ್ಲಿ ಕೇವಲ ಹಿಂದೂ ಧರ್ಮಾನುಯಾಯಿಗಳಿಗೆ ಮಾತ್ರ ಪ್ರವೇಶವುಂಟು. ಮಕ್ಕಳು ಯಾವ ಜಾತಿಭೇದಗಳ ಆಮಿಷಗಳಿಗೂ ಒಳಗಾಗದೇ ಸೋದರಸೋದರಿಯರಂತೆ ಬೆಳೆಯುತ್ತಿರುವುದು ಇಲ್ಲಿಯ ವೈಶಿಷ್ಟ್ಯ. ಇಲ್ಲಿಯ ವಾತಾವರಣ, ಕಾರ್ಯಕ್ರಮ ಎಲ್ಲ ವಿದ್ಯಾಭ್ಯಾಸದ ಪ್ರಗತಿಗೆ ಅನುಕೂಲವಾದಂಥದ್ದೇ.

ಇಲ್ಲಿ ಪ್ರವೇಶಪಡೆಯುವ ಬಾಲಿಕೆಯರಿಗೆ ಪ್ರತ್ಯೇಕ ವ್ಯವಸ್ಥೆ ಮಾಡಲಾಗಿದೆ. ಬಾಲಕರು ಸ್ವಚ್ಛ ಕೋಣೆಗಳಲ್ಲಿ ವಾಸಿಸುತ್ತ, ಆರೋಗ್ಯಕರವಾದ ವಾತಾವರಣದಲ್ಲಿ ಬೆಳೆಯುತ್ತಿದ್ದಾರೆ. ಬಾಲಿಕೆಯರಿಗೂ ಅಂತೆಯೇ ಸ್ವಚ್ಛತೆಗೆ ಆದ್ಯಗಮನ ಕೊಟ್ಟು ನೋಡಿಕೊಳ್ಳಲಾಗುತ್ತಿದೆ. ಬಾಲಕ ಬಾಲಿಕೆಯರನ್ನು ನೋಡಿಕೊಳ್ಳಲು ವಾರ್ಡನ್, ಮೇಟ್ರನ್, ಮತ್ತು ಹೊಲಿಗೆ ಸಂಗೀತಗಳನ್ನು ಕಲಿಸಲು ಉಪಾಧ್ಯಾಯರುಗಳ ನೇಮಕವಾಡಲಾಗಿದೆ. ಮಕ್ಕಳಿಗೆ ಟೈಪ್‌ರೈಟಿಂಗ್ ಕೂಡ ಇತ್ತೀಚಿನವರೆಗೂ ಕಲಿಸಿಕೊಡಲಾಗುತ್ತಿತ್ತು. ಈಗ ಕಾರಣಾಂತರದಿಂದ ನಿಲ್ಲಿಸಲಾಗಿದೆ. ಎರಡು ಟೈಪ್‌ರೈಟರುಗಳಿವೆ.

ಮಕ್ಕಳ ಕಾರ್ಯಕ್ರಮ ನಿಯಮದಂತೆ ನಡೆದುಕೊಂಡು ಹೋಗಲಿಕ್ಕೆ ತಕ್ಕ ಏರ್ಪಾಟುಗಳನ್ನು ಮಾಡಿದ್ದಾರೆ. ಬೆಳಗ್ಗೆ 5 ಗಂಟೆಗೆ ಏಳುವುದು. 5-30ರವರೆಗೆ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಮಕ್ಕಳು 5-50ರ ವರೆಗೆ ವ್ಯಾಯಾಮ ಮಾಡುತ್ತಾರೆ.ವ್ಯಾಯಾಮ ಶಿಕ್ಷಕರು ನಿಯಮಬದ್ಧವಾದ ವ್ಯಾಯಾಮ ಪಾಠಗಳನ್ನು ಹೇಳಿಕೊಡುತ್ತಿದ್ದಾರೆ. 5-50 ರಿಂದ 6-30ರ ವರೆಗೆ ಸ್ನಾನದ ಸಮಯ: ಪ್ರತಿಯೊಬ್ಬ ವಿದ್ಯಾರ್ಥಿಯೂ ಸ್ನಾನಮಾಡಲೇಬೇಕು. 6-30 ರಿಂದ 7-15ರ ವರೆಗೆ ದೇವತಾ ಪೂಜೆ, ಪ್ರಾರ್ಥನೆಗಳು ನಡೆಯುತ್ತವೆ. 7-15 ರಿಂದ 8 ಗಂಟೆಯ ವರೆಗೆ ಅಧ್ಯಯನ ಸಮಯ. ಆ ಮೇಲೆ 8-45 ಗಂಟೆ ವರೆಗೆ ಬೆಳಗಿನ ಫಲಾಹಾರ. ಅನಂತರ ವಿದ್ಯಾರ್ಥಿಗಳು ತಮ್ಮ ತಮ್ಮ ಶಾಲೆಗಳಿಗೆ ತೆರಳುತ್ತಾರೆ.

ಮಧ್ಯಾಹ್ನ 12-30 ರಿಂದ 1-30ರ ವರೆಗೆ ಊಟ. ಮಧ್ಯಾಹ್ನದ ಊಟ ಸಾಧಾರಣವಾಗಿ ಅತ್ಯಂತ ಪೌಷ್ಟಿಕಾಂಶಗಳಿಂದ ಕೂಡಿದ್ದರೂ ಸರಳವಾಗಿರುತ್ತದೆ. ವಿಚಾರಿಸಿದ್ದಕ್ಕೆ ತಿಳಿದುಬಂದ ಅಂಶವೆಂದರೆ ಇಲ್ಲಿಯ ಮಕ್ಕಳು ಅನಾರೋಗ್ಯದ ದೂರು ತಂದಿರುವುದೇ ಅಪರೂಪ. ಆರೋಗ್ಯವಂತರಾಗಿದ್ದಾರೆ. 1-30ರ ಅನಂತರ ಹುಡುಗರು ವಿದ್ಯಾಲಯಗಳಿಗೆ ಮರಳಿ ಮತ್ತೆ 4-00 ಗಂಟೆಗೆಲ್ಲಾ ಹಿಂದಿರುಗುತ್ತಾರೆ.

4-30 ರಿಂದ 6 ಗಂಟೆಯ ವರೆಗೆ ಸಂಜೆ ಆಟ, ತೋಟಗಾರಿಕೆ ಕೆಲಸ. ಆನಂದದಿಂದ ಈ ಎಲ್ಲ ಕೆಲಸ ಮುಗಿಸಿ ಮಕ್ಕಳು ಕೈಕಾಲು ಮುಖ ತೊಳೆದುಕೊಂಡು ರಾತ್ರಿ 7-30ರ ವರೆಗೆ ಪುಸ್ತಕ ಹಿಡಿದು ಓದುತ್ತಾರೆ. ಆಮೇಲೆ ರಾತ್ರಿಯ ಊಟ. ರಾತ್ರಿ 8 ಕ್ಕೆಲ್ಲಾ ಊಟ ಮುಗಿದು ಮಕ್ಕಳು 10ರ ವರೆಗೆ ಅಧ್ಯಯನದಲ್ಲಿ ತೊಡಗಿದ್ದು 10ಕ್ಕೆ ಮಲಗುತ್ತಾರೆ.

(25 ನೇ ಪುಟ ನೋಡಿ)

# ಸುಪ್ರಭಾತದಲ್ಲಿ ಸಂಸ್ಕೃತಿ

'ಸಂಸ್ಕೃತಿ' ಎನ್ನುವುದು ಮೂರಕ್ಷರದ ಪದವಾದರೂ ಅದರ ಅರ್ಥ ಅಪರಂಪಾರವಾಗಿದೆ. 'ಸಂಸ್ಕೃತಿ' ಈ ಶಬ್ದಕ್ಕೆ ಸಂಸ್ಕೃತದ ನಿಘಂಟಿನಲ್ಲಿ ದೊರೆಯುವಷ್ಟು ಅರ್ಥಗಳು ಬೇರಾವ ಪದಗಳಿಗೂ ಸಿಗುವುದಿಲ್ಲ. ಈ ಪದವನ್ನು ಅನೇಕ ಸಂದರ್ಭಗಳಲ್ಲಿ ಅನೇಕ ವಿಷಯಗಳಿಗೆ ಅನ್ವಯಿಸಿ ಬಳಸುತ್ತಾ ಬಂದಿದ್ದೇವೆ. "ಯಾವುದು ಮಾನವನ ಅಂತರ್ಗತವಾಗಿರುವ ದೈವಿಕತೆಯನ್ನು ಹೊರಗೆಳೆಯುವುದೋ ಅದೇ ಸಂಸ್ಕೃತಿ. ಸಂಸ್ಕೃತಿ ಜನಜೀವನದ ಪ್ರತಿಯೊಂದು ಚಟುವಟಿಕೆಯಲ್ಲೂ ಪ್ರಕಟವಾಗಬೇಕು" ಎಂದು ಸ್ವಾಮಿ ವಿವೇಕಾನಂದರು ಸಂಸ್ಕೃತಿಯ ಬಗ್ಗೆ ವ್ಯಾಖ್ಯಾನ ಮಾಡಿದ್ದಾರೆ. ರಾಮಾ

ಶ್ರೀ ಕೆ. ಎಂ. ಅಚ್ಯುತಕುಮಾರ

ಯಣ, ಮಹಾಭಾರತಗಳು ನಮ್ಮ ಸಂಸ್ಕೃತಿ ಸಂಪ್ರದಾಯದ ಪ್ರತೀಕಗಳು. ಇವು 'ನಿಚ್ಚಂ ಪೊಸತು ಅರ್ಣವಂಬೊಲ್'ಅತಿಗಂಭೀರಂ' ಸಾಗರ ಎಷ್ಟು ಪುರಾತನವೋ ಅಷ್ಟೇ ನೂತನವೂ ಆಗಿದೆ.

ರಾಮಾಯಣದಲ್ಲಿ ಬಾರದ ವಿಷಯಗಳಿಲ್ಲ. ಮಹರ್ಷಿ ವಾಲ್ಮೀಕಿ ತನ್ನ ಕಾವ್ಯದಲ್ಲಿ ಯಾವುವು ನಮಗೆ ನಡತೆಯ ಮಾದರಿಗಳು, ಯಾವುವು ನಡತೆಯ ಮಾದರಿಗಳಲ್ಲ ಎನ್ನುವುದನ್ನು ಸ್ಪಷ್ಟವಾಗಿ ಚಿತ್ರಿಸಿರುವನು. ರಾಮಾಯಣವನ್ನು ಓದುತ್ತಿದ್ದರೆ ತಕ್ಕ ಎಷ್ಟೋ ಮಾತುಗಳು, ನಡವಳಿಕೆಯ ರೀತಿಗಳು ನಮಗೆ ತಿಳಿಯುತ್ತವೆ. ಇದನ್ನೇ ಆಚಾರ–ವಿಚಾರ ಎನ್ನಬಹುದು. ಆಚಾರವೇ ಸನಾತನ ಹಿಂದೂ ಧರ್ಮ, ಸಂಸ್ಕೃತಿ. ಹಿಂದೂ ಸಂಸ್ಕೃತಿಯಲ್ಲಿ ಆಚಾರ ಹಾಸುಹೊಕ್ಕಾಗಿ ಸೇರಿ ಹೋಗಿದೆ. ಬೆಳಗ್ಗೆ ದೇವರ ಹೆಸರನ್ನು ಹೇಳಿ ಕೊಂಡು ಕಣ್ಣು ಬಿಡುವುದರಿಂದ ಆಚಾರ ಪ್ರಾರಂಭವಾಗಿ ರಾತ್ರಿ ದೇವರ ಹೆಸರನ್ನು ಹೇಳಿಕೊಂಡು ಕಣ್ಣು ಮುಚ್ಚಿ ಮಲಗಿ ಕೊಳ್ಳುವ ತನಕ ಆಚಾರಮಯವಾಗಿದೆ ಹಿಂದೂವಿನ ಬಾಳು. ಈ ಆಚಾರದಿಂದ ನಮ್ಮ ಸಂಸ್ಕೃತಿ, ಜನಾಂಗ ಜೀವಂತವಾಗಿದೆ. ಆಚಾರದಂತೆ ಕಲೆಯೂ ಸಂಸ್ಕೃತಿಯೇ. ಚಿತ್ರಕಲೆ, ನಾಟಕಕಲೆ, ಶಿಲ್ಪಕಲೆ, ನೃತ್ಯಕಲೆ ಮೊದಲಾಗಿ ಅರವತ್ತನಾಲ್ಕು ಕಲೆಗಳೆಂದು ನಮ್ಮವರುಗುರುತಿಸಿದ್ದಾರೆ. ಜೀವನವೇ ಒಂದು ಕಲೆ. ಎಂದೇ ಮಾತನಾಡುವುದೊಂದು ಕಲೆ ಎನ್ನಬಹುದು, ವಾಲ್ಮೀಕಿ ಸಂಸ್ಕಾರವುಳ್ಳವನು. ನಡೆಯುವ–ನಡೆ, ನುಡಿಯುವ–ನುಡಿ ಎಲ್ಲವೂ ಕಲಾತ್ಮಕ ವಾಗಿರಬೇಕೆಂದು ಬಲ್ಲವನು.

ಆದ್ದರಿಂದ ಎಲ್ಲಿ ಯಾವ ಮಾತನಾಡಬೇಕು? ಎಷ್ಟು ಮಾತಾಡಬೇಕು? ಯಾರೊಡನೆ ಹೇಗೆಮಾತಾಡಬೇಕು? ಎಂಬುದನ್ನು ಕಾವ್ಯದುದ್ದಕ್ಕೂ ಚಿತ್ರಿಸಿರುವನು. ರಾಮಾಯಣವನ್ನು ಓದುತ್ತಾ ಹೊದರೆ ಇಂತಹ ಅನೇಕ ಸನ್ನಿವೇಶಗಳು ನಮ್ಮ ಕಣ್ಣ ಮುಂದೆ ನಿಲ್ಲುತ್ತವೆ. ಉದಾಹರಣೆಗೆ ಋಷಿಗಳಿಗೆ ತೊಂದರೆ ಕೊಡುತ್ತಿದ್ದ ರಾಕ್ಷಸರನ್ನು ಕೊಲ್ಲಲು ಹೊರಟ ರಾಮನನ್ನು ಸೀತೆ ಪ್ರಶ್ನಿಸುವ ಪ್ರಸಂಗ.

ಸೀತಾನ್ವೇಷಣೆಗಾಗಿ ಹೊರಟ ರಾಮಲಕ್ಷ್ಮಣರನ್ನು ಹನುಮಂತನುಭೇಟಿಯಾಗಿ ಮಾತನಾಡುವ ಪ್ರಸಂಗವನ್ನು ನೋಡಬಹುದು. ಅಂತಹವುಗಳಲ್ಲಿ ಬಾಲಕಾಂಡದಲ್ಲಿ ವಿಶ್ವಾಮಿತ್ರರು ತಾಟಕಾ ಸಂಹಾರಕ್ಕೆಂದು ಕರೆದುಕೊಂಡು ಹೋದ ರಾಮನನ್ನು ನಿದ್ದೆಯಿಂದ ಎಬ್ಬಿಸುತ್ತಿದ್ದ ಸನ್ನಿವೇಶವೂ ಒಂದು.



ರಂಗೋಲಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ
ಚಿತ್ರಗಾರರು: ಕೆ. ಜಗದೀಶ್, ಎಸ್. ಜಯರಾಮ್, ಎ. ರಾಮಚಂದ್ರಯ್ಯ.

ಬೆಳಗಿನ ಪ್ರಶಾಂತವಾತಾವರಣದಲ್ಲಿ ಹಿಂದೂ ದೇವಾಲಗಳಲ್ಲಿ ಅದರಲ್ಲೂ ಶ್ರೀರಾಮ, ಶ್ರೀವಿಷ್ಣು ದೇವಾಲಯಗಳಲ್ಲಿ, ರೇಡಿಯೋಗಳಲ್ಲಿ ಈ ಕೆಳಗಿನ ಸುಂದರವಾದ ಶ್ಲೋಕ ಮಧುರವಾಗಿ, ಇಂಪಾಗಿ ಬಂದು ಕಿವಿಯನ್ನು ತುಂಬುತ್ತದೆ.

ಕೌಸಲ್ಯಾ ಸುಪ್ರಜಾ ರಾಮ ಪೂರ್ವಾಸಂಧ್ಯಾ
ಪ್ರವರ್ತತೇ

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.
# ವಿವಿಧ ಆರ್ಜಿತ ಉತ್ಸವಗಳ ಪರಿಷ್ಕೃತ ದರಗಳ ವಿವರಣೆ

### 1. ದರ್ಶನಗಳು

| | | |
|---|---|---|
| 1 | ವಿಶೇಷ ಪ್ರವೇಶ | ರೂ. 25 |

### 2. ಸೇವೆಗಳು

| | | |
|---|---|---|
| 1 | ಆಮಂತ್ರಣೋತ್ಸವ | ರೂ. 200 |
| 2. | ಅಭಿಷೇಕ (ಪುಳಿಕಾಪುಸೇವ) | ರೂ. 500 |
| 3. | ಗಂಬುರಗಿನ್ನೆ | ರೂ. 300 |
| 4 | ಪುನುಗುಗಿನ್ನೆ | ರೂ. 200 |
| 5. | ಜಾಫ್ರಾಗಿನ್ನೆ | ರೂ. 100 |
| 6. | ಕಸ್ತೂರಿಗಿನ್ನೆ | ರೂ. 100 |
| 7. | ಸಹಸ್ರಕಲಶಾಭಿಷೇಕ | ರೂ. 2500 |
| 8. | ತಿರುಪ್ಪಾವಡ | ರೂ. 5000 |
| 9. | ಕೋವಿಲ್ ಆಳ್ವಾರು ತಿರುಮಂಜನ | ರೂ. 1745 |
| 10. | ಐನಾ ಮಹಲಿನಲ್ಲಿನ ಡೋಲೋತ್ಸವ | ರೂ. 1000 |

### 3. ಉತ್ಸವಗಳು

| | | |
|---|---|---|
| 1. | ವಸಂತೋತ್ಸವ | ರೂ. 2500 |
| 2. | ಕಲ್ಯಾಣೋತ್ಸವ | ರೂ. 1500 |
| 3. | ಬ್ರಹ್ಮೋತ್ಸವ | ರೂ. 750 |

### 4. ವಾಹನಗಳು

1. ಸರ್ವಭೂಪಾಲವಾಹನ– ವಜ್ರಕವಚಸೇವೆ ಬಂಗಾರದ ಗರುಡ, ಕಲ್ಪವೃಕ್ಷ, ದೊಡ್ಡ ಶೇಷ ಸರ್ವಭೂಪಾಲ ಸೂರ್ಯಪ್ರಭೆ– ಒಂದೊಂದು ವಾಹನ ರೂ. 125
2. ಬೆಳ್ಳಿಯಗರುಡ, ಚಿಕ್ಕಶೇಷ, ಚಂದ್ರಪ್ರಭೆ, ಆನೆ, ಕುದುರೆ, ಹಂಸ, ಹನುಮಂತ ಒಂದೊಂದು ವಾಹನ ಸೇವೆ ರೂ. 100

ಮೂವರಿಗೆ ಮಾತ್ರ ಪ್ರವೇಶ.

### 5. ಅನ್ನಪ್ರಸಾದಗಳು (ಕಾಲುಸೇರು)

| | | |
|---|---|---|
| 1. | ದಧ್ಯೋದನ | ರೂ. 75 |
| 2 | ಪುಳಿಯೋಗರೆ (ಚಿತ್ರಾನ್ನ) | ರೂ. 75 |
| 3. | ಪೊಂಗಲ್ | ರೂ. 100 |
| 4 | ಸಕ್ಕರೆ ಪೊಂಗಲ್ | ರೂ. 100 |
| 5. | ಸಕ್ಕರೆಬಾತ್ | ರೂ. 125 |
| 6. | ಕೇಸರಿಬಾತ್ | ರೂ. 125 |
| 7. | ಪಾಯಸ | ರೂ. 25 |
| 8. | ಶೀರಾ | ರೂ. 200 |

### 6 ಪಣ್ಯ ಪ್ರಸಾದಗಳು

| | | |
|---|---|---|
| 1. | ಅಪ್ಪವು | ರೂ. 250 |
| 2. | ಲಾಡು | ರೂ. 600 |
| 3. | ವಡೆ | ರೂ. 350 |
| 4. | ಹೋಳಿ | ರೂ. 250 |
| 5. | ದೋಸೆ | ರೂ. 250 |
| 6. | ತೇನೆತೊಳ | ರೂ. 250 |
| 7. | ಸುಖಿಯವು | ರೂ. 250 |
| 8. | ಜಿಲೇಬಿ | ರೂ. 600 |

### 7. ನಿತ್ಯ ಸೇವೆಗಳು

| | | |
|---|---|---|
| 1. | ಕರ್ಪೂರ ಆರತಿ | ರೂ. 150 |
| 2. | ನವನೀತ ಆರತಿ | ರೂ. 400 |
| 3. | ಅರ್ಚನೆ | ರೂ. 200 |
| 1) | ಶಾಶ್ವತ ನಿತ್ಯ ಕರ್ಪೂರ ಆರತಿ | ರೂ. 3000 |
| 2) | ಶಾಶ್ವತ ನಿತ್ಯ ನವನೀತ ಆರತಿ | ರೂ. 8000 |
| 3) | ಶಾಶ್ವತ ನಿತ್ಯ ಅರ್ಚನೆ | ರೂ. 4000 |

ಷರಾ :— (1) ಸಹಸ್ರ ಕಲಶಾಭಿಷೇಕ ಪ್ರತಿ ಬುಧವಾರ, ತಿರುಪ್ಪಾವಡ ಪ್ರತಿ ಗುರುವಾರ ಜರುಗುವುವು.

(2) ಆಮಂತ್ರಣೋತ್ಸವಕ್ಕೆ ಐವರಿಗೆ ಬದಲಾಗಿ ಇಬ್ಬರೇ ಅನುಮತಿಸಲ್ಪಡುವರು.

(3) ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್ ಸೇವೆ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ್ನ 1 ಗಂಟೆ ರಾತ್ರಿ 8 ಗಂಟೆ ನಡುವೆ ಜರುಗುವುವು.

(4) ವಿಶೇಷ ಪ್ರವೇಶದ ಟಿಕೆಟ್ಟಿನವರು ಹಿಂದಿನಂತೆ ಧ್ವಜಸ್ತಂಭದ ಹತ್ತಿರವಲ್ಲದೆ ಮಹಾದ್ವಾರದ ಹತ್ತಿರ ಸರತಿಯ ಸಾಲಿನಲ್ಲಿ ಸೇರಿಸಲ್ಪಡುವರು.

ಕಾರ್ಯನಿರ್ವಹಣಾಧಿಕಾರಿ,
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ–517 501

ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವ
ಮಾಹ್ನಿಕಂ

ಈ ಶ್ಲೋಕ ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿ ಬರುತ್ತದೆ. ಇದು ಶ್ರೀಮದ್ರಾಮಾಯಣದ ಸರ್ವೋತ್ಕೃಷ್ಟವೂ, ಅತ್ಯಂತ ಜನಪ್ರಿಯವೂ ಆದ ಶ್ಲೋಕಗಳಲ್ಲಿ ಒಂದಾಗಿದೆ. ಈ ಶ್ಲೋಕವನ್ನು ಕೇಳಿದವರ ವೈಮನಸ್ಸುಗಳಾದರೂ ಪುಳಕಿತವಾಗದಿರದು. ರಾಮನು ಹದಿನಾರು ವರುಷ ತುಂಬುವ ಮೊದಲೇ ವಿಶ್ವಾಮಿತ್ರನೊಡನೆ ಸಂತೋಷವಾಗಿ ಯಜ್ಞರಕ್ಷಣೆ ಮಾಡುವ ಕಾರ್ಯಕ್ಕೆ ಅರಣ್ಯಕ್ಕೆ ಹೋಗಿದ್ದನು. ಆ ಎಳೆಯ ವಯಸ್ಸಿನಲ್ಲಿ ವಿಶ್ವಾಮಿತ್ರರು ಹೇಳುತ್ತಿದ್ದ ಕಥೆಗಳನ್ನು ಕೇಳುತ್ತಾ ನಿದ್ದೆಹೋಗುವುದು ಅವನ ದಿನಚರಿಯಾಗಿತ್ತು. ಆಗ ಬೆಳಗಾದ ಕೂಡಲೆ ನಿಯಮಂತರಾದ ವಿಶ್ವಾಮಿತ್ರ ಮಹರ್ಷಿಗಳ ಶ್ರೀ ರಾಮನನ್ನು ನಿದ್ದೆಯಿಂದ ಎಚ್ಚರಗೊಳಿಸುತ್ತಿದ್ದ ಪರಿ ಇದು ಆಗಿದೆ. ಇದುವೇ 'ಸುಪ್ರಭಾತ'. 'ಸುಪ್ರಭಾತ' ಎಂದರೆ ಮಂಗಳಕರವಾದ ಮುಂಜಾವ. ಈ ಸುಪ್ರಭಾತವೇ ನಮ್ಮ ಸಂಸ್ಕೃತಿಯ ಸುವರ್ಣಗನ್ನಡಿ.

ಮಾತು ಕತ್ತಿಗಿಂತ ಹರಿತವಾದುದು. ಆದ್ದರಿಂದ ಅದನ್ನು ಬಳಸುವಾಗ ನಯನಾಜೂಕು ಇರಬೇಕು. ಕೆಲವರು ನಿದ್ದೆ ಮಾಡುತ್ತಿರುವವನನ್ನು "ಏಳೋ ಕತ್ತೆ ಮಗನೆ, ತೊತ್ತಿನ ಮಗನೆ ಕುಂಭಕರ್ಣ" ಎಂದೆಲ್ಲ ಬೈದು ಎಬ್ಬಿಸುವುದುಂಟು. ಇನ್ನು ಕೆಲವರು ಒಂದು ಕೊಡ ತಣ್ಣೀರನ್ನು ತಲೆ ಮೇಲೆ ಸುರಿದು ಎಬ್ಬಿಸುವುದೂ ಉಂಟು. ಹೀಗೆ ಎಬ್ಬಿಸುವುದು ಅಂದರೆ ಅಸಂಸ್ಕೃತ, ಅನಾಗರಿಕನ ನಡತೆಯಾಗುವುದು. ಮಲಗಿದ್ದವನು ಹಾಸಿಗೆಯನ್ನು ಬಿಟ್ಟು, ಎದ್ದೇಳುವಾಗ ಹೀಗೆ ಎಚ್ಚರಗೊಳಿಸಿದವನ ಮೇಲೆ ಮುನಿದು ಮನಸ್ಸಿನಲ್ಲೇ (ಕೆಲವೊಮ್ಮೆ ಬಾಯಿಬಿಟ್ಟುಕೂಡಾ) ಬೈದುಕೊಳುತ್ತಾನೆ. ಹಾಗೆ ಎದ್ದವನ ಅಂದಿನ ಮನಸು ಕೆಟ್ಟು ಹಾಳಾಗಿ ಹೊಗುತ್ತದೆ. ಅವನಲ್ಲಿ ದಿನವಿಡೀ ಯಾವರೀತಿಯ ಉತ್ಸಾಹವಾಗಲೀ, ಲವಲವಿಕೆಯಾಗಲಿ ಕಾಣಿಸುವುದಿಲ್ಲ. ಸಾಮಾನ್ಯವಾಗಿ ಯಾವುದಾದರೂ ಒಂದುದಿನ ನಮ್ಮ ಕೆಲಸ ಕಾರ್ಯಗಳು ಆಗದೇ ಹೋದರೆ 'ನಾನು ಬೆಳಗ್ಗೆ ಎದ್ದ ತಕ್ಷಣ ಯಾರ ಮುಖದರ್ಶನ (ಶನಿದರ್ಶನವಾದಂತೆ) ಮಾಡಿದೆನೋ ಏನೋ ಒಂದು ಕೆಲಸವೂ ಆಗಲಿಲ್ಲ' ಎಂದು ಬೈದು ಕೊಳ್ಳುತ್ತೇವೆ. ಹಾಗೆಯೇ ಬೆಳಗ್ಗೆ ಎದ್ದೇಳುವಾಗಲೇ ಬೈಗಳನ್ನು ಕೇಳಿದರೆ ದಿನವೀಡಿ ಬೈಗಳನ್ನೇ ಕೇಳಬೇಕಾಗುವುದೆಂದು ಮನಸ್ಸಿನಲ್ಲಿ ಅಂದು ಕೊಳ್ಳುತ್ತೇವೆ. ಏಳುವವನು ಆದ್ದರಿಂದಲೇ ಬೆಳಗ್ಗೆ ಎದ್ದ ತಕ್ಷಣ ಒಳ್ಳೆಯವರ ಮುಖವನ್ನು ಒಳ್ಳೆಯವರ ಮಾತುಗಳನ್ನು ಕೇಳಬೇಕೆನ್ನುವುದು.

ಎಂದೇ ಬೆಳಗ್ಗೆ ನಿದ್ದೆಯಿಂದ ಎದ್ದ ತಕ್ಷಣದೇವರ ಪಟವನ್ನೋ, ತಂದೆ ತಾಯಿಗಳ ಮುಖವನ್ನೊ ನೋಡುವ ಪದ್ಧತಿ ಹಿಂದೂಗಳಲ್ಲಿ ಇಂದಿಗೂ ಇರುವುದು. ಒಟ್ಟಿನಲ್ಲಿ ಅನಾರ್ಯ, ಅವಾಚ್ಯ ಶಬ್ದಗಳಿಂದ ಬೈದು ಎಬ್ಬಿಸಿದವನಿಗಾಗಲೀ, ಎದ್ದವನಿಗಾಗಲೀ ಇದರಿಂದ ಯಾವ ಪುರುಷಾರ್ಥವಾಗಲಿ ಪ್ರಯೋಜನವಾಗಲೀ, ಲಾಭವಾಗಲೀಇಲ್ಲ. ಇದರಿಂದ ಇಬ್ಬರ ಮನಸ್ಸುಗಳಿಗೆ (ನಾಲಿಗೆಗಳು ಕೆಟ್ಟು) ಆಘಾತವಾಯಿತಷ್ಟೆ. ತನಗೂ ದುಃಖವಿಲ್ಲದಂತೆ ಇತರರಿಗೂ ತನ್ನಿಂದ ದುಃಖವಾಗದಂತೆ ವರ್ತಿಸುವುದು ಸುಸಂಸ್ಕೃತನ ಲಕ್ಷಣ. ಬೈಗಳಿಗೆ ಬದಲಾಗಿ ಒಳ್ಳೆಯ ಮಾತಿನಿಂದ ಎಚ್ಚರಗೊಳಿಸಿದರೆ ಅದು ಸತ್ಪರಿಣಾಮವನ್ನು ಬೀರುತ್ತದೆ. ಅವನು ದಿನವಿಡೀ ಸಂತೋಷ ಸಂಭ್ರಮದಿಂದಿರುತ್ತಾನೆ. ಇದರಿಂದ ಎಬ್ಬಿಸಿದವನ ಹಾಗೂ ಎದ್ದವನ ಮನಸ್ಸಿಗೂ ಸಂತೋಷ, ತೃಪ್ತಿ. ಬಸವಣ್ಣ ಹೇಳಿದಂತೆ 'ಅಯ್ಯಾ ಎಂದಡೆ ಸ್ವರ್ಗ ಎಲವೋ ಎಂದರೆ ನರಕ' ತಾನೇ. ಇದು ಇಂಗ್ಲೀಷಿನಲ್ಲಿ 'ಜಂಟ್ಲ್ ಮ್ಯಾನ್ ಬಿಹೇವಿಯರ್' ಎನ್ನುತ್ತಾರಲ್ಲ, ಅಂತಹುದು. ಸಂಸ್ಕೃತಿಯ ಮೊದಲನೆಯಗುಣ ಎಂದರೆ ಇತರರಿಗೆ ಸಂತೋಷವನ್ನುಂಟು ಮಾಡುವುದೇ ಆಗಿದೆ. "ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಂ" ಎನ್ನುವ ಮಾತೂ ಇದನ್ನೇ ಸ್ಪಷ್ಟ ಪಡಿಸುತ್ತದೆ. ಒಳ್ಳೆಯ ಮಾತು ಸತ್ಪರಿಣಾಮವನ್ನು, ಕೆಟ್ಟ ಮಾತು ದುಷ್ಪರಿಣಾಮವನ್ನು ಬೀರುತ್ತದೆ ಎನ್ನುವುದರಲ್ಲಿ ಸಂಶಯ ಬೇಡ. ಆದ್ದರಿಂದ ಬೆಳಗ್ಗೆ ಮಲಗಿರುವ ವ್ಯಕ್ತಿಯನ್ನು ಎಬ್ಬಿಸುವುದರಲ್ಲಿ ಒಬ್ಬನ ಸಂಸ್ಕೃತಿಯನ್ನು ಕಂಡು ಕೊಳ್ಳಬಹುದು. ಸಂಸ್ಕೃತಿ ಎಂದರೇನು, ನಡೆ–ನುಡಿತಾನೆ? ನಡೆ–ನುಡಿಯಲ್ಲಿ ಸೌಂದರ್ಯ ವ್ಯಕ್ತವಾಗ ಬೇಕು. ಅದು ದೈನಂದಿನ ವ್ಯವಹಾರದಲ್ಲೂ ವ್ಯಕ್ತವಾಗಬೇಕು. ಯಾರಾದರೂ ಮನೆಗೆ ಬಂದಾಗ ಅವರನ್ನು ಸತ್ಕರಿಸುವ ವಿಧಾನದಲ್ಲೂ ಈ ಸಂಸ್ಕೃತಿ ಸುವ್ಯಕ್ತವಾಗಬೇಕು. "ಏನು ಬಂದಿರಿ, ಹದುಳವಿದ್ದಿರೆ ಎಂದರೆ ನಿಮ್ಮ ಮೈಸಿರಿ ಹಾರಿ ಹೋಹುದೆ? ಕುಳ್ಳಿರೆಂದರೆ ನೆಲ ಕುಳಿ ಹೋಹುದೆ?" ಎಂದು ಪ್ರಶ್ನಿಸುವ ಅಣ್ಣನ ಮಾತಿನಿಂದ ಮಾತಿನಲ್ಲಿ ನಯವಿರಬೇಕು ಎನ್ನುವುದನ್ನ ತಿಳಿದುಕೊಳ್ಳಬಹುದು. ನಮ್ಮ ಸ್ನೇಹಿತರೋ ಇನ್ನಾರಾದರೋ ಇದಿರಾದರೆ ಇಂಗ್ಲೀಷನಲ್ಲಿ Good Morning, Good Evening, Good Night, Good Afternoon, Wish you best of luck ಎಂದೆಲ್ಲ 'ವಿಷ್' (WISH) ಮಾಡುವ ಪದ್ಧತಿಯಲ್ಲೂ ಇದೇ ಭಾವನೆಯಡಗಿದೆ ಎನ್ನಬಹುದು.

ವಾಲ್ಮೀಕಿಯ ಆದರ್ಶವನ್ನು, ಸುಸಂಸ್ಕೃತಿಯನ್ನು ಎಷ್ಟು ಕೊಂಡಾಡಿದರೂ ಅಲ್ಪವೇ. "ಕೌಸಲ್ಯಾ ಸುಪ್ರಜಾರಾಮ............'ಎನ್ನುವಲ್ಲಿ ಒಂದೊಂದು ನುಡಿಯೂ ಹೃದಯದಿಂದ ಪ್ರೇಮ ಪೂರ್ಣವಾಗಿ ಮೂಡಿ ಬಂದುದಾಗಿದೆ. ಮಾತಿನಲ್ಲಿ ನಯ, ಮೃದುತೆ, ಲಾಲಿತ್ಯಗಳು ತುಂಬಿರಬೇಕೆನ್ನುತ್ತಾರೆ. ಇಲ್ಲಿ ಅವೆಲ್ಲವೂ ಕೂಡಿ ಹೃದಯಹಾರಿಗಳಾಗಿವೆ. ತಾಟಕಾ ಸಂಹಾರಕ್ಕೆಂದು ವಿಶ್ವಾಮಿತ್ರನ ಜೊತೆಯಲ್ಲಿ ಅರಣ್ಯಕ್ಕೆ ಹೋದಾಗ ರಾಮನು ಇನ್ನೂ ಹದಿನಾರರ ಹರಯದ ಹುಡುಗನಾಗಿದ್ದನು. ಬೆಳಗಾಗಿದ್ದರೂ ನಿದ್ದೆ ಮಾಡುವುದು ಬಾಲಕರ ಸ್ವಭಾವ. ನಿಯಮವಂತನಾದ ವಿಶ್ವಾಮಿತ್ರನು ಸೂರ್ಯೋದಯಕ್ಕಿಂತ ಮುಂಚಿತವಾಗಿ ನಿದ್ದೆಯಿಂದ ಎದ್ದು ರಾಮನನ್ನು ನೋಡುತ್ತಾನೆ. ಅವನು ಇನ್ನೂ ನಿದ್ದೆ ಮಾಡುತ್ತಿದ್ದಾನೆ. ವಿಶ್ವಾಮಿತ್ರನು ದಶರಥನನ್ನು ಒಪ್ಪಿಸಿ ರಾಮನನ್ನು ಅರಮನೆಯಿಂದ ಆರಣ್ಯಕ್ಕೆ ಕರೆದು ಕೊಂಡು ಬಂದಿದ್ದಾನೆ; ರಾಕ್ಷಸರ ಸಂಹಾರಕ್ಕಾಗಿ. ಅರ್ಥಾತ್ ರಾಮನು ಅರಣ್ಯಕ್ಕೆ ಬಂದಿರುವುದು ವನಸಂಚಾರ, ವನವಿಹಾರಕ್ಕಾಗಿ ಅಲ್ಲ ಮಹತ್ವವಾದ ಕಾರ್ಯದಮೇಲೆ; ಋಷಿಗಳಿಗೆ ರಾಕ್ಷಸರಿಂದಾಗುತ್ತಿರುವ ತೊಂದರೆಯನ್ನು ನಿವಾರಿಸುವುದಕ್ಕಾಗಿ. ರಾಮನು ಬಾಲಕನಾದ್ದರಿಂದ ತಾನು ಬಂದಿರುವ ಕಾರ್ಯವನ್ನು ಮರೆತು ನಿದ್ದೆ ಮಾಡುತ್ತಿದ್ದಾನೆ. ಅದಕ್ಕಾಗಿ ವಿಶ್ವಾಮಿತ್ರರು ನಿಯತಕಾಲಕ್ಕೆ (ಅದು ಅವರಿಗೆ ಅಭ್ಯಾಸವಾಗಿ ಬಿಟ್ಟದೆ) ಬಾಲಕ ರಾಮನನ್ನ ಎಬ್ಬಿಸುತ್ತಾರೆ ಎನ್ನುವುದರಲ್ಲಿ ನಮ್ಮ ಭಾರತೀಯ ಸಂಸ್ಕೃತಿಯ ಸಾರಸರ್ವಸ್ವ ಅಡಗಿದೆ. 'ಕೌಸಲ್ಯಾ ಸುಪ್ರಜಾರಾಮಾ' ಎಂದು ರಾಮನನ್ನು ಸಂಬೋಧಿಸುತ್ತಾರೆ. ಸುಮ್ಮನೆ 'ರಾಮ' ಎಂದು ಸಂಬೋಧಿಸಿದ್ದರೆ ಈಗಿರುವಷ್ಟು ಧ್ವನ್ಯಾರ್ಥವಾಗಲಿ, ಸ್ವಾರಸ್ಯವಾಗಲಿ ಉಳಿಯುತ್ತಿರಲಿಲ್ಲ; ಬರುತ್ತಿರಲಿಲ್ಲ. ಎಂದೇ 'ಕೌಸಲ್ಯೆಯ ಸುಪುತ್ರನಾದ ರಾಮನೆ' ಎಂದು ಅವನನ್ನ ಸಂಬೋಧಿಸುತ್ತಾರೆ. ಹೀಗೆಂದಿರುವುದರಿಂದ ರಾಮನು ಬೆಳಗ್ಗೆ ನಿದ್ದೆಯಿಂದ ಎಚ್ಚರಗೊಂಡ ತಕ್ಷಣ ಅವನಿಗೆ ತಾಯಿಯ ನೆನಪು ಬರುತ್ತದೆ. ಅರಣ್ಯದಲ್ಲಿರಲಿ, ಅರಮನೆಯಲ್ಲಿರಲಿ ಅವನಿಗೆ ತಾಯಿಯ ನೆನಪಾಗಬೇಕು. ಅವನು ಎದ್ದೇಳುವಾಗ ತಾಯಿಯನ್ನು ನೆನೆಸಿಕೊಂಡೇ ಎದ್ದೇಳಬೇಕು.

"ತಂದೆಯ ನೆನೆದರೆ ತಂಗಳು ಬಿಸಿಯಾಯ್ತು ।
ಗಂಗಾದೇವಿ ನನ್ನ ಹಡೆದವ್ನ ನೆನೆದರೆ ।
ಮಾಸಿದ ತಲೆಯೂ ಮಡಿಯಾಯ್ತು ॥"

ತಂದೆಯನ್ನ ನೆನೆದರೆ ತಂಗುಳು ಬಿಸಿಯಾಗುತ್ತದೆ. ತಾಯಿ ಗಂಗೆಯಂತೆ ಪವಿತ್ರ. ಅವಳ ನೆನಪು

(22 ನೇ ಪುಟ ನೋಡಿ)



# ಸನಾತನ ಧರ್ಮ ರಂಗ

## ಹರಿದಾಸ ವಾಙ್ಮಯ

| | | | | | | | | | | |
|---|---|---|---|---|---|---|---|---|---|---|
| 1 | | 2 | | | | | | × | × | 3 |
| 4 | × | | × | 5 | | | | × | 6 | |
| | 7 | | × | 8 | | | | | × | |
| | | | × | × | × | 9 | | | | |
| | | | × | 10 | 11 | 12 | | | | × |
| | | | 13 | | | 14 | | | | × |
| × | × | | | | | 15 | | | | |
| 16 | | × | | | | 17 | 18 | 19 | 20 | |
| × | × | × | | | | | | | × | × |
| 21 | | | | | | | | | 22 | |
| × | × | × | | × | | | | | 23 | |

### ಎಡದಿಂದ ಬಲಕ್ಕೆ

1. ಮುಳಬಾಗಲ ಮಠಕ್ಕೆ ಒಂಬತ್ತನೇ ಸ್ವಾಮಿಗಳು (8)
5. ಈ ಪ್ರಕಾರದ ಸಾಹಿತ್ಯ ಶ್ರೀಪಾದರಿಂದ ಆರಂಭವಾಯಿತು (4)
6. ಕನಕದಾಸರದು—ಸಾಹಿತ್ಯ (2)
8. ಕೃಷ್ಣನನ್ನು ಕಿಂಡಿಯಲ್ಲಿ ಕಂಡವನು (5)
9. ಇವರು ಸೋದೆ ಮಠದ ಸ್ವಾಮಿ (4)
12. ಈ ಗೀತೆ ರಚಿಸಿದ್ದು ಶ್ರೀಪಾದರಾಜರು (4)
14. ದಾಸಕೂಟದ ಮೂಲಪುರುಷ (4)
15. ಶ್ರೀಪಾದರಾಜರ ಹಾಡುಗಳ ಅಂಕಿತ (5)
16. ವ್ಯಾಸರಾಯರು—ಯೋಗ ನಿವಾರಕರು (2)
20. ದಾಸರಲ್ಲಿ ಇದು ಪ್ರಾಧಾನ್ಯ (2)
21. ದಾಸವಾಙ್ಮಯದ 3ನೇ ಮಜಲಿನ ಕರ್ತೃ (5)
22. ಈತ ದಾಸರ ಇಷ್ಟದೈವ (2)
23. ಸಾಮಾನ್ಯವಾಗಿ ಹರಿದಾಸರು—ಸಂಪ್ರದಾಯದವರು (2)

### ಮೇಲಿನಿಂದ ಕೆಳಕ್ಕೆ

2. ಪುರಂದರದಾಸರ ಪ್ರಸಿದ್ಧ ಹಾಡು (7)
3. ಶ್ರೀಪಾದರ ಶಿಷ್ಯೋತ್ತಮ (4)
4. ಶ್ರೀಪಾದರು ರಚಿಸಿದ ಗೀತೆ (5)
7. ಈ ಗೀತೆಯೂ ಶ್ರೀಪಾದರದ್ದೇ (4)
10. ದಾಸಕೂಟಕ್ಕೆ ಮೊದಲಿಗ (6)
11. ಕನಕದಾಸರ ಉತ್ಕೃಷ್ಟ ಕಾವ್ಯ (7)
13. ದಾಸಕೂಟವನ್ನು ಪುರಂದರರ ನಂತರ ಬೆಳೆಸಿದವರು (6)
17. ದಾಸಸಂಪ್ರದಾಯಕ್ಕೆ ಮತ್ತೊಂದು ಹೆಸರು (4)
18. ಕನಕದಾಸರು ನೆಲಸಿದ್ದ ಊರು (4)
19. ಜಗನ್ನಾಥದಾಸರ ಪ್ರಸಿದ್ಧ ಕೃತಿ (4)

**ನು. ವರದರಾಜ, ಬೆಂಗಳೂರು**

(ಉತ್ತರಗಳಿಗಾಗಿ 38 ನೇ ನೋಡಿ)

# ಮಹಾಮಸ್ತಕಾಭಿಷೇಕ



ಕರ್ನಾಟಕದವರಿಗಷ್ಟೇ ಅಲ್ಲದೆ ಇಡೀ ಭಾರತದವರಿಗೆಲ್ಲ ಒಂದು ಅಪೂರ್ವ ಭೂವು ದೃಶ್ಯ ಫೆಬ್ರವರಿ 81 ರಲ್ಲಿ. ಶ್ರವಣಬೆಳಗೊಳದಲ್ಲಿ ಆಕಾಶಕ್ಕೇರಿದ ಮಾನವತೆಯ ಸಂಕೇತವಾದ ಬಾಹುಬಲಿಗೆ ಮಹಾಮಸ್ತಕಾಭಿಷೇಕ. ಹನ್ನೆರಡು ವರ್ಷಗಳಿಗೊಮ್ಮೆ ಈ ಮಹಾಮಸ್ತಕಾಭಿಷೇಕ ನಡೆಯುವುದನ್ನು ನೋಡಿದ ಅಸಂಖ್ಯ ಜನರಿರಬಹುದು. ಆದರೆ ಬಾಹುಬಲಿ ವಿಗ್ರಹ ಪ್ರತಿಷ್ಠಾಪನೆಯ ಸಹಸ್ರ ವಾರ್ಷಿಕೋತ್ಸವದ ಮಹಾಮಸ್ತಕಾಭಿಷೇಕವನ್ನು ಅವರೂ ಪ್ರಥಮಬಾರಿ ಫೆಬ್ರವರಿ 81 ರಲ್ಲಿ ಕಾಣುತ್ತಾರೆ.

ಕ್ರಿ. ಶ. ಹತ್ತನೆಯ ಶತಕದಲ್ಲಿ ಕರ್ನಾಟಕ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಸಮೃದ್ಧಿಯಿಂದ ಇದ್ದ ಕಾಲ. ರಾಷ್ಟ್ರಕೂಟರ ಸಾಮಂತ ಗಂಗ ರಾಜಮಲ್ಲನ ಸೇನಾಧಿಪತಿ, ಕವಿ ಚಾವುಂಡರಾಯ ಶಸ್ತ್ರ ಧರಿಸಿದ ಶಾಂತಿಯ ದೂತನಾಗಿದ್ದ. ಉದಾರ ಕವಿಪೋಷಕನೂ ಆಗಿದ್ದ. ಅವನ ಮನೋಭೀಷ್ಟದ ಫಲ ಶ್ರವಣಬೆಳಗೊಳದ ಶ್ರೀ ಗೊಮ್ಮಟೇಶ್ವರ ಮೂರ್ತಿ. ಐವತ್ತೇಳು ಅಡಿ ಎತ್ತರದ ಬಾಹುಬಲಿಯ ಧ್ಯಾನಸ್ಥ ನಯನಗಳು ಕಿರುಹಾಸದಿಂದ ಕೂಡಿದ ಅಧರಗಳು ಭೂಮಿಯಲ್ಲಿ ನಿಂತೂ ಆಗಸಕ್ಕೇರುವ ಆ ಹಿರಿಮೆ ದೂರಕ್ಕೂ ನಿಂತು ನೋಡುವಂತೆ ಮಾಡುತ್ತವೆ. ಕವಿ ಬೊಪ್ಪಣ ಪಂಡಿತ ಈ ಮೂರ್ತಿಯನ್ನು ಕುರಿತಾಡಿದ್ದು ಗಮನಾರ್ಹ, "ಔನ್ನತ್ಯಮುಂ ನುತಸೌಂದರ್ಯಮುಂ ಊರ್ಜಿತ ಅತಿಶಯಮುಂ ತನ್ನಲ್ಲಿ ನಿಂದಿದುರ್ವೇಂ ಕ್ಷಿತಿ ಸಂಪೂಜ್ಯಮೋ ಗೊಮ್ಮಟೇಶ್ವರ ಜಿನ ಶ್ರೀರೂಪಂ.......................' (ಇಂದು ಧರ್ಮಸ್ಥಳ, ಕಾರ್ಕಳ, ಮೂಡಬಿದಿರೆಗಳಲ್ಲೂ ಗೊಮ್ಮಟ ಮೂರ್ತಿಗಳುಂಟು)

ಬಾಹುಬಲಿ ಆದಿತೀರ್ಥಂಕರ ವೃಷಭದೇವನ ದ್ವಿತೀಯ ಪುತ್ರ. ಭರತ ಚಕ್ರವರ್ತಿಯ ತಮ್ಮ. ಅತ್ಯುನ್ನತ್ಯ ಚಕ್ರಿ ಭರತನನ್ನು ಎದುರಿಸುವ ಅವನ ಗತ್ತು, ಆತ್ಮಸ್ಥೈರ್ಯ–ಅದನ್ನು "ಗಂಡಗಾಡಿ" ಎನ್ನೊಣವೇ –ಕನ್ನಡದ ಮಹಾಕವಿ ಪಂಪ ಎಳೆಎಳೆಯಾಗಿ ಬಿಡಿಸಿದ್ದಾನೆ ತನ್ನ ಆದಿ ಪುರಾಣದಲ್ಲಿ. ಸೆಡ್ಡು ಹೊಡೆದು ಸವಾಲೆಸೆಯುವ ಅವನ ಭೂಮಿಪ್ರಿಯತೆಯನ್ನು ಸಾಂಗತ್ಯದಲ್ಲಿ ಸವಿವರ ಗೋಳಿಸಿದ್ದಾನೆ ರತ್ನಾಕರವರ್ಣಿ ಭರತೇಶ ವೈಭವದಲ್ಲಿ. ಆನಂತರದ ಅವನ ಊರ್ಧ್ವಮುಖಗಮನ ಲೌಕಿಕತೆಯ ತಿರಸ್ಕೃತಿಗಳೂ ಅಷ್ಟೇ ಚೆನ್ನ. ಸ್ವತಃ ಚಾವುಂಡರಾಯನೂ ತನ್ನ ಚಾವುಂಡರಾಯ ಪುರಾಣದಲ್ಲಿ (ಮಹಾಪುರಾಣದ ಕನ್ನಡ ಗದ್ಯಾನುವಾದ) ಬಾಹು ಬಲಿ ಪ್ರಸಂಗವನ್ನು ರಸೋತ್ಕರ್ಷವಾಗುವಂತೆ ವಿವರಿಸಿದ್ದಾನೆ.

ಇಂತಹ ಬಾಹುಬಲಿಗೆ ಮಹಾಸ್ತಕಾಭಿಷೇಕ. ಸುಮಾರು ಲಕ್ಷ ಲಕ್ಷ ಸಂಖ್ಯೆಯಲ್ಲಿ ಜನ ಸೇರುವರೆಂದು ನಿರೀಕ್ಷಿಸಲಾಗಿದೆ. ಕರ್ನಾಟಕ ಸರಕಾರ ಶ್ರವಣಬೆಳಗೊಳದ ಬಳಿ ಮಹಾಮಸ್ತಕಾಭಿಷೇಕಕ್ಕಾಗಿ ತಾತ್ಕಾಲಿಕ ಉಪನಗರ ನಿರ್ಮಾಣಕ್ಕೆ ತೊಡಗಿದೆ. ಅನೇಕ ಧಾರ್ಮಿಕ, ಸಾಮಾಜಿಕ ಸಂಸ್ಥೆಗಳು ಯಾತ್ರಿಕರ ಅನುಕೂಲಗಳಿಗಾಗಿ ಸ್ವಯಸೇವೆಯನ್ನು ಕೈಗೊಂಡಿವೆ. ಶ್ರವಣಬೆಳುಗೊಳ ಬೆಂಗಳೂರಿನಿಂದ ಮಂಗಳೂರಿನ ದಾರಿಯಲ್ಲಿ ಬೇಲೂರು ಹಳೇಬಿಡುಗಳಿಗೂ ಧರ್ಮಸ್ಥಳಕ್ಕೂ ಹತ್ತಿರವಿದೆಯಾಗಿ ಪ್ರವಾಸಕ್ಕೆ ಒಂದು ಉತ್ತಮ ಅವಕಾಶವನ್ನೊದಗಿಸುತ್ತದೆ.

—ಸೀನ

(19 ನೇ ಪುಟದಿಂದ)

ಮಾಸಿದ ತಲೆಯನ್ನು ಮಡಿಮಾಡುತ್ತದೆ. ತಂದೆ ತಾಯಿಗಳ ನೆನಪು ನಿರ್ಭಾವ, ನಿರುತ್ಸಾಹಗಳನ್ನು ತೊಲಗಿಸುವಂತಹ ಶಕ್ತಿಯನ್ನು ಪಡೆದಿದೆ ಎನ್ನುವುದನ್ನು ಜಾನಪದರಿಂದಲೂ ಅರಿಯಬಹುದು. ಇನ್ನೊಂದು ಕಡೆ

"ಎದ್ದೂನೆ ನಿಮುಗ್ಯಾನ ಏಳುತಲೆ ನಿಮುಗ್ಯಾನ ।
ಸಿದ್ಧರಗ್ಯಾನ, ಶಿವಗ್ಯಾನ ಮಾಶಿವನೆ ।
ನಿದ್ದೆಗಣ್ಣಾಗೆ ನಿಮುಗ್ಯಾನ"

ಎಂದು ಅವರು ಹಾಡಿಲ್ಲವೆ ? ನೆನೆದಿಲ್ಲವೆ ? ಮನೆಯಲ್ಲಿ ಪ್ರತಿದಿವಸ ಕೌಸಲ್ಯೆತಾಯಿ ಎದ್ದು ಏನು ಮಾಡುತ್ತಿದ್ದಳೋ, ಅದನ್ನು ರಾಮನು ಕಣ್ಣಾರೆ ಕಂಡಿರಬೇಕು. ಬೆಳಗ್ಗೆ ಎದ್ದ ತಕ್ಷಣ ಅವನಲ್ಲಿ ಅವನ ತಾಯಿಯ ಆದರ್ಶಭಾವನೆಗಳು (ನಡತೆಯೂ ಸೇರಿ) ಮೂಡಿಬರಬೇಕೆಂಬುದು ವಿಶ್ವಾಮಿತ್ರನ ಅಭಿಪ್ರಾಯ. ಅಂದಿಗೂ ನಮ್ಮ ಮನೆಗಳಲ್ಲಿ ಮಕ್ಕಳಿಗೆ ರಾಮ, ಲಕ್ಷ್ಮಣ, ನಾರಾಯಣ ಶಿವಶಂಕರ, ಸೀತೆ, ಪಾರ್ವತಿ, ಗಂಗೆ, ಗೌರಿ ಎಂದು ದೇವರ ಹೆಸರುಗಳನ್ನು ಇಟ್ಟಿರುವ ಉದ್ದೇಶ ಹಿಂದೆ ಅಡಗಿರುವುದು ಇದೇ ಉದಾತ್ತ ಭಾವನೆಯಿಂದಲ್ಲವೆ? ಮನೆಯಲ್ಲಿ ಮರಣ ಹೊಂದಿದ ಹಿರಿಯರ ಹೆಸರಗಳನ್ನು ಮರಿಮಕ್ಕಳಿಗಿಡುವುದರ ಉದ್ದೇಶವೂ ಇದೇ ಎಂದು ಬಲ್ಲವರಿಗೆ ಬೇರೆ ಹೇಳ ಬೇಕಾಗಿಲ್ಲವಷ್ಟೆ. "ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ" ಎನ್ನುತ್ತಾನೆ ವಿಶ್ವಾಮಿತ್ರ. ಕವಿ ರಾಮನಿಗೆ ಕೊಟ್ಟಿರುವ ವಿಶೇಷಣ 'ನರಶಾರ್ದೂಲ' .ಇಲ್ಲಿ ಬಂದಿರುವ 'ಕರ್ತವ್ಯಂ' ಎನ್ನುವುದನು ಹಾಗೇ ಗಮನಿಸಿ. ರಾಮನು ಎದ್ದ ತಕ್ಷಣ ಅವನ ಮನಸ್ಸು ಕರ್ತವ್ಯದ ಕಡೆಗೆ ಹೋಗಬೇಕು. ಅವನು ಎಚ್ಚರವಾಗ ಬೇಕಾಗಿರುವುದು ದೇವತಾ ಪ್ರಾರ್ಥನೆಯ ಕಾರ್ಯಕ್ಕಾಗಿ ಅಷ್ಟೇ ಅಲ್ಲ ಮಹತ್ಕಾರ್ಯಗಳಿಗಾಗಿಯೂ ಕೂಡ. (ಸಾಮಾನ್ಯವಾಗಿ ಮನೆಯಲ್ಲಿ ಮಲಗವಾಗ ಹೆಂಡತಿಗೂ ಅಣ್ಣನಿಗೋ ಯಾರಿಗಾದರೂ ಬೆಳಗ್ಗೆ ಬೇಗ ಎಬ್ಬಿಸಿ ಬಸ್ಸಿಗೆ ಹೋಗಬೇಕು ಕೆಲಸದ ಮೇಲೆ ಹೋಗಬೇಕು ಎಂದು ಹೇಳಿ ಮಲಗುವು ದಿಲ್ಲವೆ) ಇದು ವಿಶ್ವಾಮಿತ್ರನ ಮಾತಿನ ಅಭಿಪ್ರಾಯ. ಇದನ್ನು ಕೇಳಿ ರಾಮನು ಹರ್ಷಚಿತ್ತನಾಗಿ ಎದ್ದಿರ ಬೇಕು. ವಿಶ್ವಾಮಿತ್ರನ ಹೊಗಳಿಕೆಯ ಮಾತು, ಪ್ರೋತ್ಸಾಹದ ನುಡಿ ಅವನನ್ನು 'ನರಶಾರ್ದೂಲ'ನನ್ನಾಗಿ ಅಂದರೆ "ಪುರುಷಸಿಂಹನನ್ನಾಗಿ ಮಹಾಪುರುಷನನ್ನಾಗಿ ಶೂರ ಪ್ರವರನನ್ನಾಗಿ ಮಾಡಿರಬೇಕು. ವಿಶ್ವಾಮಿತ್ರರು ತಮ್ಮ ಮಾತುಗಳಿಂದ ರಾಮನಲ್ಲಿ ತನ್ನ ಕೆಲಸವನ್ನು ಹರ್ಷದಿಂದಲೂ, ಉತ್ಸಾಹದಿಂದಲೂ ಮಾಡುವ ಮನೋವೃತ್ತಿಯನ್ನು ಮೂಡಿಸುತ್ತಿದ್ದಾರೆ. ಜಾನಪದರು ಬೆಳಗಿನ ಜಾವದ ಪ್ರಶಾಂತ ತಂಪಿನಲ್ಲಿ ಭೂಮಿ ತಾಯಿಯನ್ನು ಸ್ಮರಿಸಿರುವುದನ್ನು ನೆನೆಸಿ ಕೊಳ್ಳಬಹುದು "ಎದ್ದೊಂದು ಗಳಿಗೇಲಿ ಯಾರ್‍ಯಾರ ನೆನೆಯಲಿ ಎಳ್ಳು ಜೀರಿಗೆ ಬೆಳೆಯೋಳ ಭೂಮಿ ತಾಯ ಎದ್ದೊಂದು ಗಳಿಗೆ ನೆನೆದೇನು" ಇಲ್ಲಿ ಜಾನಪದ ಹೃದಯವೊಂದು ಭೂಮಿ ತಾಯಿಯನ್ನು ಎದ್ದೊಂದುಗಳಿಗೆ ನೆನೆಯುತ್ತಿರುವುದನ್ನು ನೋಡಬಹುದು ನಮ್ಮ ರಕ್ತ ಮಾಂಸಗಳೆಲ್ಲ ಈ ತಾಯಿಯ ದೇಹದಿಂದ ಬಂದಿದ್ದು. ಅನ್ನ ಉಣಿಸಿ, ಹಾಲೂಡಿಸಿ ಬೆಳೆಸಿದವಳು ಈ ತಾಯಿ ಆದ್ದರಿಂದ ಅವಳು ಪ್ರಭಾತಸ್ಮರಣೀಯಳಾಗಿದ್ದಾಳೆ. ಹಾಗೆಯೇ ಇಲ್ಲಿಯೂ ಕೂಡಾ, ಎಂದೇ ವಿಶ್ವಾಮಿತ್ರನು ರಾಮನಿಗೆ ತಾಯಿ ಕೌಸಲ್ಯೆಯ ನೆನಪನ್ನು ತಂದು ಕೊಡುವುದರ ಜೊತೆಗೆ, ಅವನು ಬಂದಿರುವ ಕರ್ತವ್ಯದ ಕಡೆಗೂ ಗಮನ ಸೆಳೆಯುತ್ತಿದ್ದಾನೆ. ವಾಲ್ಮೀಕಿಯ ಶುಚಿಯಾದ,ರುಚಿಯಾದ ಹಿತಮಿತವಾದ ಮನೋಭಾವದಿಂದ ಮೂಡಿದ ಮಾತುಗಳಲ್ಲಿ ನಮ್ಮ ಸಂಸ್ಕೃತಿ ಇದೆ. ಇದೇ ಸಂದರ್ಭದಲ್ಲಿ ಜಾನಪದ ಸಾಹಿತ್ಯದಲ್ಲಿ "ಎಳಯ್ಯ ಏಳು ಏಳು ಚಿನ್ನದಗಿರಿ ಏಳಯ್ಯ ಸ್ವಾಮಿ, ಬೆಳಗಾದೊ" ಎಂದು ಬೆಳಗಿರಿ ರಂಗಸ್ವಾಮಿಯನ್ನು ಎಚ್ಚರಿಸುವ ಪದ್ಯವನ್ನೂ ಕುವೆಂಪುರವರ "ದೇವರ ಮಕ್ಕಳೇ ಎಲ್ಲರೂ ಏಳಿ ಬೆಳ್ಳನೆ ಬೆಳಗಾಯಿತು ಬೇಗೇಳಿ. ಇಂದಿನ ಜಗದುಲ್ಲಾಸವು ನೀವೇ ನಾಳೆಯ ಮುಂದಿನ ಜೀವವು ನೀವೇ" ಎಂದು ಅನುರಾಗ ಪೂರಿತವಾಗಿ ಉದಯರಾಗ ಹಾಡಿರುವ ಪದ್ಯವನ್ನು ಸ್ಮರಿಸಬಹುದಾಗಿದೆ.

ಯಾವ ಮನುಷ್ಯನಲ್ಲಾದರೂ ಶಕ್ತಿಯನ್ನು ಎರಡು ರೀತಿಗಳಿಂದ ತುಂಬಬಹುದು. ವ್ಯಕ್ತಿಯಲ್ಲಿರುವ ಗುಣಗಳನ್ನು ಎತ್ತಿ ತೋರಿಸಿ, ಕೊಂಡಾಡಿ ಬೆನ್ನು ತಟ್ಟುವುದು ಒಂದು. ಇದರಿಂದ ವ್ಯಕ್ತಿಗೆ ಸ್ಫೂರ್ತಿ, ಉತ್ತೇಜನಗಳನ್ನು ಕೊಟ್ಟಂತಾಗುತ್ತದೆ. ಅವನ ಬೆಳವಣಿಗೆಗೆ ನೀರೆರೆದಂತಾಗುತ್ತದೆ. ವ್ಯಕ್ತಿಯನ್ನು ಪ್ರಶಂಸಿಸಿ ಅವನಿಗೆ ಹಿತವನ್ನುಂಟುಮಾಡಬಹುದು, ಉನ್ನತ ಸಾಧನೆಗೆ ಅವನನ್ನು ಪ್ರೇರೇಪಿಸಬಹುದು. ಸುಂದರಕಾಂಡದಲ್ಲಿರುವ ಆಂಜನೇಯನನ್ನು ನೆನೆದು ಕೊಳ್ಳಿ. ವಾನರಸೈನ್ಯ ಸಮುದ್ರದ ತಡಿಗೆ ಬಂದಿದೆ. ಅವರೆಲ್ಲರ ಮುಂದೆ ಲಂಕೆ ಹೋಗುವುದು ಹೇಗೆ ಎನ್ನುವ ಸಮಸ್ಯೆ ಸಹಜವಾಗಿ ತಲೆ ಎತ್ತಿ ನಿಂತಿದೆ. ವಾನರರಲ್ಲಿ ಯಾರಾದರೂ ಶತಯೋಜನ ವಿಸ್ತೀರ್ಣವುಳ್ಳ ಸಮುದ್ರವನ್ನು ದಾಟಿ ಸೀತೆಯನ್ನು ಕಂಡು ಬರಬೇಕಾಗಿದೆ. ಅದಕ್ಕಾಗಿ ಅನೇಕ ಕಪಿ ವೀರರು ತಮ್ಮ ಲಂಘನ ಸಾಮರ್ಥ್ಯವನ್ನು ಹೇಳಿಕೊಂಡರೂ ಅವರಾರೂ ಆ ಕೆಲಸಕ್ಕೆ ಮುಂದಾಗುವುದಿಲ್ಲ.. ಆಗ ಜಾಂಬವಂತನು ಒಬ್ಬನೇ ಕುಳಿತಿದ್ದ ಹನುಮಂತನನ್ನು "ಬಲಂ ಬುದ್ಧಿಶ್ಚ ತೇಜಶ್ಚ ಹರಿಪುಂಗವ ವಿಶಿಷ್ಟಂ ಸರ್ವಭೂತೇಷು ಕಿಮಾತ್ಮಾನಂ ನ ಬುಧ್ಯಸೇ" ಎಂದು ಪ್ರಶ್ನೆ ಮಾಡಿ ಅವನ ಬಗ್ಗೆ ತನಗಿದ್ದ ಅಪಾರ ಮೆಚ್ಚುಗೆಯನ್ನು ವ್ಯಕ್ತ ಪಡಿಸಿ ಅವನೇ ಲಂಕೆಗೆ ಹೋಗಿ ಬರತಕ್ಕ ಸಮರ್ಥನೆಂದನು. ಅವನ ಮತ್ತು ವಾನರ ಸೈನ್ಯದ ಹೊಗಳಿಕೆಯ ಹಿಗ್ಗಿನಿಂದ ಮಾರುತಿ ಮಹಾ ಸಮುದ್ರವನ್ನು ಒಂದು ಗೋಷ್ಪದವನ್ನು ದಾಟುವಷ್ಟು ಸುಲಭವಾಗಿ ನೆಗೆದು ದಾಟಿದನು.

ಒಬ್ಬನನ್ನು ಯಾವಾಗಲೂ ನಿಂದಿಸುತ್ತಾ 'ಹೇಡಿ, ಅಂಜುಕುಳಿ. ಕೆಲಸಕ್ಕೆ ಬಾರದವನು' ಎಂದೆಲ್ಲ ಬೈಯುತ್ತಾ ಅವನ ಉತ್ಸಾಹಕ್ಕೆ ತಣ್ಣೀರೆರಚುತ್ತಿದ್ದರೆ ಎಂಥಹ ಶೂರನೂ ಹೇಡಿಯಾಗುವನು. ನಿಂದೆಯು ವ್ಯಕ್ತಿಯ ಮನಸ್ಸನ್ನು ಜಗ್ಗಿ ಕುಗ್ಗಿಸುತ್ತದೆ, ಅವನ ಬೆಳವಣಿಗೆಗೆ ಕೊಡಲಿ ಪೆಟ್ಟನ್ನು ಹಾಕುತ್ತದೆ. ಒಬ್ಬ ವಿದ್ಯಾರ್ಥಿಯನ್ನು 'ನೀನು ಸೋಮಾರಿ ಓದು ನಿನ್ನ ತಲೆಗೆ ಹತ್ತುವುದಿಲ್ಲ, ಶುದ್ಧ ಶುಂಠಿ, ದಡ್ಡ, ಕುರಿ, ಕತ್ತೆ ಮೇಯಿಸು; ಎಂದೆಲ್ಲ ಮೂದಲಿಸಿ ಬಯ್ದರೆ ಅದರಿಂದ ಕೆಡುಕಾಗುವುದು. ಬಾಲಕನಿಗೆ ವಿದ್ಯೆಯಲ್ಲಿ ನಿಜವಾಗಿಯೂ ಆಸಕ್ತಿ ಇಲ್ಲದೆ ಸೋಮಾರಿಯಾಗುವನು, ಎಲ್ಲರಿಗಿಂತ ಹಿಂದೆ ಬೀಳುವನು. ಯಾರಾದರೂ ಕೆಲಸಕ್ಕೆ ಬಾರದವನೆಂದು ಬಯ್ದರೆ ಹಾಗೆಯೇ ಆಗುವನು.

ಸಂಸ್ಕೃತದಲ್ಲಿ'ವಚನೇ ಕಾ ದರಿದ್ರತಾ'—ಬಡತನ ಮಾತಿನೋಳೇಕೆ ಎನ್ನುವ ಸುಭಾಷಿತ ಉಂಟು. ಧನಕನಕ ವಾಹನಗಳನ್ನು ಕೊಡುವುದಕ್ಕೆ ನಮ್ಮಿಂದ ಆಗದಿರಬಹುದು. ಆದರೆ ಒಳ್ಳೆಯ ಮಾತನ್ನಾದರೂ ಆಡಿ ಹರುಷ ಹುಮ್ಮಸ್ಸುಗಳನ್ನುಂಟುಮಾಡುವುದಕ್ಕಾಗುವುದಿಲ್ಲವೆ?

ಸರ್ವಜಂತುಗಳು ತುಷ್ಟಿಗೊಳುವುವು ಪ್ರಿಯ
ವಾಕ್ಯವನಾಡಿದರೆ
ಅದರಿಂದ ಪ್ರಿಯವನೆ ನುಡಿವುದನೆಲರು

ಇದನ್ನು ಬಾಳಿನಲ್ಲಿ ಸಮನ್ವಯಗೊಳಿಸುವುದು ಉತ್ತಮ ಸಂಸ್ಕೃತಿಯ ಕುರುಹು. ವಾಲ್ಮೀಕಿ ತೋರಿದ ಈ ಜೀವಂತ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಳ್ಳಬೇಕು.

★

# ಶ್ರೀಚೌಡೇಶ್ವರೀ ಮಹಾತ್ಮ್ಯ

ಲೇಖಕ· ಪ್ರಕಾಶಕ: ಬಿ. ಎಸ್. ನಾರಾಯಣಮೂರ್ತಿ
5ನೇ ಕ್ರಾಸ್, ಹೊಸಬಡಾವಣೆ
ಲಕ್ಷ್ಮೀನಾರಾಯಣಪುರಂ ಬೆಂಗಳೂರು

ಕನ್ನಡದಲ್ಲಿ ಹೈಂದವ ಸಂಸ್ಕೃತಿಗಳ, ಸಾಹಿತ್ಯ ಕುರಿತಾದ ಗ್ರಂಥಗಳು ಇತ್ತೀಚೆಗೆ ಕಡಮೆಯಾಗ ತ್ತಿರುವುದು ಜನರ ಒಲವು ಎತ್ತ ಕಡೆ ಎಂಬುದನ್ನು ಇಂಗಿತವಮಾಡಿ ತಿಳಿಸುತ್ತದೆ. ಜನರಲ್ಲಿ ಭೌತಿಕ ಸುಖಾಪೇಕ್ಷೆಯೇ ಹೆಚ್ಚಾಗುತ್ತ ನಡೆದಂತೆಲ್ಲ ಪ್ರಾಪಂಚಿಕ ಕಷ್ಟ ಕೋಟಲೆಗಳು ಅವರಿಗೆ ಅಂಟಿ ಕೊಳ್ಳುವುದು ಸಹಜ. ಆಗ ಪಾರಮಾರ್ಥಿಕತೆ ಮಾನವನ ಅನುಭವದಲ್ಲಿ ಹಾಸುಹೊಕ್ಕಾಗಿ ಅವ ನಿಗೆ ತುಸು ಶಾಂತಿ ನೀಡುತ್ತದೆ. ಈ ನಿಟ್ಟಿನಲ್ಲಿ ಪ್ರಪಂಚದ ಸಾಹಿತ್ಯ ಸಾಧಿಸಿರುವುದು ಒಂದು ನಿದರ್ಶನವೇ ಎಂದೆನ್ನಬಹುದು.

ಪ್ರಸ್ತುತ ಗ್ರಂಥವು ಆದಿಶಕ್ತಿಯೂ ಚಂಡ ಮುಂಡ ಮರ್ದನೆಯೂ ಆದ ಶ್ರೀ ಚೌಡೇಶ್ವರೀ ದೇವಿಯನ್ನು ಕುರಿತ ಒಂದು ಭಕ್ತಿಯುತ ನಿವೇದನೆ. ತೆಲುಗಿನಲ್ಲಿ ಪ್ರಸಿದ್ಧ ಕವಿಗಳಾದ ಶ್ರೀ ಗುಮ್ಮ ರಾಜು ರಾಮಕವಿಯವರು ರಚಿಸಿದ "ಶ್ರೀ ಚೌಡೇಶ್ವರೀ ಮಾಹಾತ್ಮ್ಯಮು'' ಎಂಬ ಕೃತಿಯ ಭಾವಾನುವಾದ ಇದು. ಅನುವಾದ ಮಾಡಿದವರ ಭಕ್ತಿಯ ನೈವೇದ್ಯವಾಗಿ ಪರಿಣಮಿಸಿದೆ.

ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟಿರುವ ವಿದ್ವಾಂಸ ಶ್ರೀ ಗೋಟೂರು ವೆಂಕಟಾಚಲಶರ್ಮರ ವಿದ್ವತ್ಪೂರ್ಣತೆಯನ್ನು ಪ್ರಶಂಸಿಸಬಹುದಾದರೂ "ತಾವು ಶೈವರು, ವೈಷ್ಣವರು ಇತ್ಯಾದಿಯಾಗಿ ಹೇಳಿಕೊಂಡರೂ ಪ್ರಥಮತಃ, ವಸ್ತುತಃ, ಅವರೆಲ್ಲರೂಶಾಕ್ತರೇ, ಶಕ್ತ್ಯುಪಾಸಕರೇ'' ಎಂಬುದನ್ನು ಸಾಧಿಸಲು ಹೊರಟ ವಾದ ಅಷ್ಟಾಗಿ ಸ್ವೀಕಾರಾರ್ಹವಲ್ಲವೆಂದು ಹೇಳಬಹುದಾಗಿದೆ.ವಿಷ್ಣು ತತ್ತ್ವ ಪ್ರತಿಪಾದಕರ ಅಭಿಪ್ರಾಯವು ಬೇರೆಯೇ ಇರಬಹುದು. ಅವರು ನೀಡಿರುವ ಈ ಶ್ಲೋಕ ಗಾಯತ್ರಿಗೆ ಸಂಬಂಧಿಸಿದ್ದೇ ವಿನಾ ಶಕ್ತ್ಯುಪಾಸನೆಗೆ ಸಂಬಂಧಿಸಿದ್ದಲ್ಲವೆಂಬುದು ಸ್ವಯಂ ವೇದ್ಯ

"ಸರ್ವೇ ಶಾಕ್ತಾದ್ವಿಜಾಃ ಪ್ರೋಕ್ತಾ
ನಶೈವಾ ನ ಚ ವೈಷ್ಣವಾಃ
ಆದಿದೇವೀಮುಪಾಸನ್ತೇ
ಗಾಯತ್ರೀಂ ವೇದಮಾತರಮ್''

ಇಲ್ಲಿ ಸ್ಪಷ್ಟವಾಗಿ ಈ ಮಾತನ್ನು ಗಾಯತ್ರಿಗೆ ಮಾತ್ರ ಉದ್ದರಿಸಿರುವುದರಿಂದ ಮುನ್ನುಡಿಕಾರರ ಮಾತು ಇಲ್ಲಿ ಸ್ವಲ್ಪ ಚರ್ಚಾರ್ಹವೆಂದು ಅನ್ನಿಸಿಕೆ.

ಎಂದೇ ಅವರ

"ಈ ಪರಾಶಕ್ತಿಯ (ಮಾತೃ ತತ್ತ್ವಪ್ರಾಶಸ್ತ್ಯ ಪ್ರತಿಪಾದನೆಯು) ಕೇವಲ ಒಂದು ಶಾಕ್ತ ಮತ ಸಂಪ್ರದಾಯ ಸಿದ್ಧಾಂತ ಸ್ಥಾಪನಾ ಪ್ರಯತ್ನವೆಂದಾಗಲೀ ವೈಜ್ಞಾನಿಕರ ದಾರ್ಶನಿಕರ ತತ್ತ್ವ ಸಮಸ್ಯೆಯರಾದ್ಧಾಂತವೆಂದಾಗಲೀ ತಿಳಿಯಬಾರದು'' ಎಂಬ ಮಾತು ಅನ್ವರ್ಥವಲ್ಲದ್ದಾಗುತ್ತದೆ.

ಶ್ರೀ ಚೌಡೇಶ್ವರೀ ತಾಯಿಯು ನಂದವರೀಕ ಬ್ರಾಹ್ಮಣರ ಅಧಿದೈವ ಎಂಬ ಪೌರಾಣಿಕ ಸತ್ಯವನ್ನು ಅನೇಕ ಉದಾಹಣೆಗಳ ಮೂಲಕ ಈ




ಗ್ರಂಥದಲ್ಲಿ ಎತ್ತಿ ತೋರಿಸಲಾಗಿದೆ. ನಂದ ಮಹಾರಾಜನ ಕಥೆಯ ಮೂಲಕ ನಂದವರೀಕ ಸಮಾಜದ ಅಸ್ತಿತ್ವವನ್ನು ಪ್ರತಿಪಾದಿಸಲಾಗಿದೆ. ಚೌಡೇಶ್ವರೀ ಮಾತೆಯು ನಂದಮಹಾರಾಜನ ವಿಪತ್ತನ್ನು ಪರಿಹರಿಸಿದಳು. ವಿಧಿಯ ಕೈವಾಡದಂತೆ ನಂದ ರಾಜನು ತಾನೇ ಕೈಯಾರ ಬ್ರಾಹ್ಮಣರಿಗೆ ದಾನ ಮಾಡಿದ ನಂದವರಪುರವನ್ನು ಅವರಿಗೆ ಕೊಡಲು ನಿರಾಕರಿಸಿದ.

ಇದರಿಂದ ನೊಂದುಕೊಂಡ ಆ ಬ್ರಾಹ್ಮಣರು ಕಾಶೀನಗರದಿಂದಲೇ ಚೌಡೇಶ್ವರೀ ದೇವಿಯನ್ನು ಪ್ರತ್ಯಕ್ಷ ಕರೆದುಕೊಂಡು ಬಂದು ತಮ್ಮ ನೈತಿಕ ಬಲದಿಂದ ನಂದಪುರವನ್ನು ಪಡೆದ ಸಂಗತಿ ತುಂಬ ರೋಚಕವಾಗಿ ಮೂಡಿ ಬಂದಿದೆ. ನಂದ ವರಪುರದಲ್ಲಿ ರಾಜನಾಗಿದ್ದ ನಂದ ಮಹಾರಾಜ ತುಂಬ ದೈವ ಭಕ್ತಿ ವಿನಯ ಸದ್ಗುಣಗಳ ಭಂಡಾರ. ಅವನ ತಂದೆಯೂ ಅವನಂತೆಯೇ ಇದ್ದವನು. ಮಗನಾದ ನಂದನೂ ಅವನನ್ನೇ ಅನುಸರಿಸಿದನು.

ಒಮ್ಮೆ ಬೇಡ ಜನಾಂಗದ ರಾಜನೊಬ್ಬ ಬಂದು ನಂದ ಮಹಾರಾಜನನ್ನು ಬೇಟೆಗಾಗಿ ಕರೆದನು. ಅರಣ್ಯ ಪ್ರದೇಶದಲ್ಲಿಯೇ ಇದ್ದ ಶ್ರೀ ಶೈಲದ ಶ್ರೀ ಭ್ರಮರಾಂಬ ಮಲ್ಲಿಕಾರ್ಜುನರ ದರ್ಶನವನ್ನು ಮಾಡುವ ಮಹದೋದ್ದೇಶದಿಂದ ರಾಜನು ಆನಂದದಿಂದ ತನ್ನ ಪರಿವಾರ ಸಹಿತ ಬೇಟೆಗೆಂದು ಅರಣ್ಯಕ್ಕೆ ನಡೆದನು.

ಅರಣ್ಯದಲ್ಲಿ ಬೇಟೆಮಾಡಿದ ಅನಂತರ ರಾಜನು ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಭ್ರಮರಾಂಬಾ ದೇವಿಯ ದೇವಾಲಯ ಹೊಕ್ಕು ದರ್ಶನಮಾಡಿಕೊಂಡು ಹೊರಟಾಗ ಕಾಡಿನಲ್ಲಿ ತಪಸ್ವಿಯೊಬ್ಬನ ಕರುಣೆ ಪಡೆದು ಅವನಿಂದ ನಿತ್ಯವೂ ಕಾಶಿ ಕ್ಷೇತ್ರಕ್ಕೆ ಹೋಗಿ ಗಂಗಾಸ್ನಾನ ಮಾಡಿ ಬರುವಷ್ಟು ಶಕ್ತಿ ನೀಡುವ ಮಂತ್ರದ ಉಪದೇಶ ಪಡೆದ.

ಅತ್ಯಾನಂದದಿಂದ ಹಿಂದಿರುಗಿದ ನಂದ ಮಹಾರಾಜನು ಬೆಳಗಿನ ಜಾವದಲ್ಲಿ ತನ್ನ ರಾಣಿ ಇನ್ನೂ ಮಲಗಿರುವಾಗಲೇ ಎದ್ದು ಮಂತ್ರ ಶಕ್ತಿಯಿಂದ ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿ ಹಿಂದಿರುಗಿ ಬಂದು ಬಿಡುತ್ತಿದ್ದ.

ಈ ರೀತಿ ದಿನಗಳುರುಳಿದವು.ಒಂದು ದಿನ ಪತ್ನಿಗೆ ತನ್ನ ಪತಿ ಬೆಳಗಿನ ಜಾವವೇ ಎದ್ದು ಎಲ್ಲಿಗೋ ಹೋಗುವ ಇಂಗಿತ ಕಂಡು ಬಂದು ಅವಳು ಹೇಗೋ ಪೀಡಿಸಿ ವಿಷಯವನ್ನು ಅರಿತು ತನ್ನನ್ನೂ ಗಂಗಾಸ್ನಾನಕ್ಕೆ ಕರೆದೊಯ್ಯುವಂತೆ ಗಂಡನನ್ನು ಒಡಂಬಡಿಸಿದಳು. ದುರದೃಷ್ಟಕ್ಕೆ ಎಂಬಂತೆ ಗಂಗಾ ಸ್ನಾನ ಮಾಡಿದ ಮೇಲೆ ಹಿಂದಿರುಗುವ ಮೊದಲು ಅಲ್ಲಿಯೇ ರಜಸ್ವಲೆಯಾದಳು. ರಜಸ್ವಲೆಯಾದವಳನ್ನು ಮಂತ್ರ ಶಕ್ತಿಯಿಂದ ರಾಜಧಾನಿಗೆ ಕರೆದೊಯ್ಯುವಂತಿರಲಿಲ್ಲ. ರಾಜನು ಹೇಗೋ ಅಲ್ಲಿದ್ದ ಬ್ರಾಹ್ಮಣ ಸಮೂಹದ ಸಹಾಯದಿಂದ ರಾಜಧಾನಿ ಸೇರಿದ.

ಆಮೇಲೆ ದಿನಗಳುರುಳಿ ಬ್ರಾಹ್ಮಣರು ರಾಜನು ಇತ್ತ ವಚನದಂತೆ ಅವನಿಂದ ರಾಜ್ಯದ ಭಾಗವನ್ನು ಪಡೆಯಲು ಬಂದರು. ಅದಕ್ಕಾಗಿ ಶ್ರೀ ಚೌಡೇಶ್ವರೀ ಮಾತೆಯನ್ನೇ ಸಾಕ್ಷಿಯನ್ನಾಗಿ ಮಾಡಿಕೊಂಡು ಕರೆತಂದರು.

ನಂದ ಮಹಾರಾಜನು ಆ ವಿಪ್ರೋತ್ತಮರಿಗೆ ನಂದಪುರವನ್ನು ಧಾರೆಯೆರೆದು ದಾನಮಾಡಿ ಚೌಡೇಶ್ವರಿಯ ದರ್ಶನದಿಂದ ಕೃತಾರ್ಥನಾದನು.

ಇಷ್ಟು ಕಥೆಯನ್ನು ಪೂರ್ವಕಥೆಗಳ ಒಕ್ಕಣಿಕೆಗಳ ಸಹಾಯದಿಂದ ಲೇಖಕರು ಭಕ್ತಿ ಪೂರ್ವಕವಾಗಿ ಇಲ್ಲಿ ಕೊಟ್ಟಿದ್ದಾರೆ. ಆದಿ ಶಕ್ತಿಯ ಅವತಾರಗಳನ್ನು ಸಂಕ್ಷೇಪವಾಗಿ ಈ ಹೊತ್ತಗೆಯಲ್ಲಿ ನೀಡಲಾಗಿದೆ. ದೇವೀ ಮಹಾತ್ಮೆಯ ಕಥೆಯು ಇಲ್ಲಿ ಸಂಕ್ಷೇಪವಾಗಿ ನೀಡಲಾಗಿದೆ. ರಂಭ, ಕರಂಭ ರಾಕ್ಷಸ ಸಹೋದರರು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅವನಿಂದ ವರವನ್ನು ಪಡೆದು ಮಹಿಷವೊಂದನ್ನು ಕ್ರೀಡಿಸಿ ಅದರಿಂದ ಮಹಿಷಾಸುರನು ಹುಟ್ಟಿ ಬ್ರಹ್ಮನನ್ನು ತನ್ನ ತಪಸ್ಸಿನಿಂದ ಮೆಚ್ಚಿಸಿ ಸ್ತ್ರೀಯರಹೊರತುಬೇರೆಯಾರಿಂದಲೂ ತನ್ನ ಮರಣವಾಗಬಾರದೆಂದು ವರಪಡೆದ ವಿಷಯ, ಅನಂತರ ಅವನು ತನ್ನ ರಾಕ್ಷಸ ಪಡೆಯೊಂದಿಗೆ ಇಂದ್ರನನ್ನು ಪರಾಜಿತನನ್ನಾಗಿಸಿದ್ದು ಆಗ ಪಾರ್ವತೀದೇವಿಯು ಚಾಮುಂಡೇಶ್ವರಿಯಾಗಿ ಮಹಿಷ ರಾಕ್ಷಸನನ್ನು ಕೊಂದದ್ದು—ಇವೆಲ್ಲವೂ ಈ ಪುಸ್ತಕದಲ್ಲಿ ವಿವರಿತವಾಗಿದ್ದು ಆಸ್ತಿಕರ ಮನಸ್ಸನ್ನು ಭಕ್ತಿಶ್ರದ್ಧೆಗಳೆಡೆ ಆಕರ್ಷಿಸುತ್ತದೆ. ಇಲ್ಲಿ ಕೊಟ್ಟಿರುವ ಉಪಕಥೆಗಳ ಸಂಖ್ಯೆ ಮಿತವಾದರೂ ಮುಖ್ಯಕಥೆಗೆ ಸಹಾಯಕವಾಗಿ ಬಂದಿವೆ. ಅನುವಾದ ಭಾಷೆ ಸರಳವಾಗಿದ್ದು ಅಲ್ಲಲ್ಲಿ ದೇವಿಯ ಸ್ತುತಿಕಾರ್ಯದಂತೆ ರೋಚಕವಾಗಿ ಮೂಡಿಬಂದಿವೆ—ಉದಾಹರಣೆಗೆ

"ಹಿಮಗಿರಿಯ ಮುದ್ದು ಕುವರಿಯು ನೀನು. ಲೋಕಾದ್ಯಂತ ಸ್ತುತಿಸುವ ಭಕ್ತರ ಪ್ರೀತಿಪಾತ್ರಳು ನೀನು. ದುಷ್ಟದೈತ್ಯರ ದರ್ಪವನ್ನಡಗಿಸಿದ ಪ್ರಳಯಾಗ್ನಿಯು ನೀನು. ನಂಬಿದವರ ಕಷ್ಟಗಳನ್ನು ಪರಿಹರಿಸಿ ಸಂತಸವುಂಟು ಮಾಡುವ ಜನನಿಯು ನೀನು. ನಿತ್ಯ ನಿರವದ್ಯ ನಿರ್ಮಲ ಮೂರ್ತಿಯು ನೀನು. ಶತ್ರುಮರ್ದಿನಿ, ಶರ್ವಾಣಿ ಶಕ್ತಿಯು ನೀನು. ತ್ರಿಮೂರ್ತಿಗಳ ಇರುವಿಕೆಗೆ ಮೂಲವು ನೀನು. ಶ್ರೀ ಚೌಡಮಾಂಬೆಯೇ ನಿನ್ನ ಅದ್ಭುತ ಮಹಿಮೆಯನ್ನು ವರ್ಣಿಸಲು ಸಾಧ್ಯವೇ ?"

ಇಂಥ ಹಲವಾರು ನಿದರ್ಶನಗಳನ್ನು ಕೊಡಬಹುದಾಗಿದೆ. ಪುಸ್ತಕದ ಮುದ್ರಣ, ಅಚ್ಚುಕಟ್ಟು ಮುದ್ದಾಗಿದೆ. ಸಂಗ್ರಹಯೋಗ್ಯವಾದ ಗ್ರಂಥವಿದು.

*

—ನು. ರಂಗನಾಥ

(24ನೇ ಪುಟ ದಿಂದ)

## ಹೆಣ್ಣುಮಕ್ಕಳು

ಹೆಣ್ಣು ಮಕ್ಕಳನ್ನು ನೋಡಿಕೊಳ್ಳಲು ಮೇಟ್ರನ್ ಒಬ್ಬರಿದ್ದಾರೆ. ಶ್ರೀಮತಿ ರಾಜೇಶ್ವರಿ ಎಂಬಾಕೆ ಅಲ್ಲಿಯ ಮೇಟ್ರನ್. ತುಂಬಚಟುವಟಿಕೆ ಯಿಂದಿರುವ ಆಕೆ ನೀಡಿದ ಅಂಶಗಳಂತೆ ಹೆಣ್ಣು ಮಕ್ಕಳು ತುಂಬ ಶಿಸ್ತಿನವರು. ಒಟ್ಟು 40 ಮಂದಿ ಹೆಣ್ಣು ಮಕ್ಕಳಿದ್ದಾರೆ ಅಲ್ಲಿ. ಅವರಲ್ಲಿ ಒಬ್ಬ ಹೆಣ್ಣು ಮಗಳು ಕಾಲೇಜಿನಲ್ಲಿಓದುತ್ತಿದ್ದಾಳೆ. ಪ್ರೌಢಶಾಲೆ ಯಲ್ಲಿ 2 ಮತ್ತು ಉಳಿದವರೆಲ್ಲ ಪ್ರೈಮರಿ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಪಡೆಯುತ್ತಿದ್ದಾರೆ.

ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾಗಿ ನಾಟ್ಯ, ಸಂಗೀತ, ಹೊಲಿಗೆ ಶಿಕ್ಷಣಗಳನ್ನೂ ಇಲ್ಲಿ ನೀಡಲಾಗುತ್ತಿದೆ. ಅವರ ವೈಯಕ್ತಿಕ ಬೌದ್ಧಿಕ ಪ್ರಗತಿಯ ಕಡೆ ಗಮನ ನೀಡಲಾಗುತ್ತಿದೆ. ಈ ವರದಿಗಾರನ ಭೇಟಿಯಾದಾಗ ಮಕ್ಕಳು ಮಧ್ಯಾಹ್ನದ ಸಿನಿಮಾಕ್ಕೆ ಹೊರಡಲು ಅಣಿಯಾಗಿದ್ದುದು ಕಂಡು ಬಂತು. ವರ್ಷದಲ್ಲಿ ಆರು ಬಾರಿ ಸಿನಿಮಾಕ್ಕೆ ಕೂಡ ಮಕ್ಕಳನ್ನು ಕರೆದೊಯ್ಯುವ ಪದ್ಧತಿ ಇದ್ದು ಇದು ಅವರ ಮನರಂಜನೆಗೆ ತುಂಬ ಸಹಾಯಕವಾಗಿದೆ. ಶುಭ್ರವಸನ ಧರಿಸಿದ, ತಲೆಬಾಚಿ ಹೂ ಮುಡಿದ, ತುಂಬ ಮುಗ್ಧ ಸಣ್ಣ ಹೆಣ್ಣು ಮಕ್ಕಳು ಸಾಲಾಗಿ ಹೊರಕ್ಕೆ ಹೊರಡುವ ಮುನ್ನ ಈ ವರದಿಗಾರನಿಗೂ ಬಾಲಮಂದಿರದ ಗುಮಾಸ್ತರಿಗೂ "ಟಾಟಾ" ಮಾಡಿ ಹೊರಟ ದೃಶ್ಯ ಆನಂದದಾಯಕವಾಗಿತ್ತು.

## ಗಂಡುಮಕ್ಕಳು

ಗಂಡುಮಕ್ಕಳಿಗೂ ಅನುಕೂಲಿಸುವಂತೆ ಹೊಲಿಗೆ, ಸಂಗೀತ ಪಾಠಗಳನ್ನು ನೀಡಲಾಗುತ್ತಿದೆ. ಹೆಚ್ಚಾಗಿ ನೈತಿಕ ಶಿಕ್ಷಣಕ್ಕೇ ಪ್ರಾಧಾನ್ಯ ನೀಡಿ ದೇವತಾಪೂಜೆ, ಪ್ರಾರ್ಥನೆಗಳ ಕಡೆಗೆ ಹೆಚ್ಚು ಒತ್ತು ಕೊಡಲಾಗುತ್ತಿದೆ. ಗಂಡು ಮಕ್ಕಳು ತುಂಬ ಚಟುವಟಿಕೆಯಿಂದ, ಆರೋಗ್ಯವಂತರಾಗಿದ್ದು ಪ್ರಶ್ನೆಗಳಿಗೆ ತುಂಬ ಆತ್ಮೀಯವಾಗಿ ಉತ್ತರ ನೀಡಿದ ಆ ಬಾಲಕರು ಎಂಥ ರಾಜಕಾರಣಿಗಳನ್ನು ಕೂಡ ಮೀರಿಸಬಲ್ಲರೆಂಬುದು ಸ್ಪಷ್ಟವಾಗುತ್ತದೆ. ಅವರಿಗೆ ತಮಗೆ ಆಶ್ರಯನೀಡಿರುವ ಬೆಟ್ಟದೊಡೆಯ ಶ್ರೀನಿವಾಸನ ಬಗ್ಗೆ ಅಪಾರ ಪ್ರೀತಿ, ಮಮತೆ. ಅವರನ್ನು ಆಗಾಗ ದೇವರ ದರ್ಶನಕ್ಕೆ ಕೂಡ ಕರೆದೊಯ್ಯಲಾಗುತ್ತದೆ. (ತಿರುಮಲೆ ಬೆಟ್ಟಕ್ಕೆ).

ಬೆಳಗ್ಗೆ ಉಪಾಹಾರ. ಹಾಲು. ಮಧ್ಯಾಹ್ನ ಊಟ. ಸಂಜೆ ಹಾಲು. ರಾತ್ರಿ ಭೋಜನ. ಆಗಾಗ ಹಣ್ಣು ಹಂಪಲುಗಳ ನೀಡಿಕೆ. ಅಲ್ಲದೆ ಹಬ್ಬ ಹರಿದಿನಗಳಲ್ಲಿ ಸಿಹಿತಿಂಡಿಗಳ ಸುಗ್ಗಿ. ಮಕ್ಕಳ ಮನೋಧರ್ಮವನ್ನರಿತು ನಡೆಸಿಕೊಳ್ಳುವ ವಾರ್ಡನ್ ಶ್ರೀ ಜಯರಾಮಯ್ಯ. ಈ ಎಲ್ಲವನ್ನೂ ನಿರ್ವಹಿಸುವ ಮ್ಯಾನೇಜರ್. ಎಲ್ಲರ ಮನೋಧರ್ಮ ವೆಂಕಟೇಶ್ವರನ ಸೇವೆ ಎಂಬುದೇ ಆಗಿರುವಾಗ ಕೆಲಸ ಕಾರ್ಯಗಳೇಕೆ ಚೊಕ್ಕಟವಾಗಿರವು.

## ವಸ್ತ್ರ

ಮಕ್ಕಳಿಗೆ ಉಚಿತವಾಗಿ ವಸ್ತ್ರಗಳನ್ನು ಕೂಡ ಕೊಡಮಾಡುತ್ತಿದ್ದಾರೆ. ಪ್ರತಿಯೊಬ್ಬನಿಗೂ ವರ್ಷಕ್ಕೆ 6 ಜೊತೆ ಉಡುಪು, ಒಂದು ಟ್ರಂಕು, ಚಾಪೆ, ತಲೆದಿಂಬು, ಹೊದೆಯಲು ಕಂಬಳಿ. ಇವಲ್ಲದೆ ತಟ್ಟೆ ಲೋಟಗಳನ್ನೂ ಅವರಿಗೆ ನೀಡಲಾಗಿದೆ.

## ಹಲವು ಖ್ಯಾತರು

ಅಂದು ಇದೇ ಬಾಲಮಂದಿರದಲ್ಲಿ ತಂಗಿದ್ದ ಶ್ರೀ ಪಿ. ಪ್ರಭಾಕರ್ ಎಂಬುವರು ಇಂದು ಬಿ. ಇ. ಮುಗಿಸಿ ಎಂಜಿನಿಯರ್ ಆಗಿದ್ದಾರೆ. ಅಂದಿನ ಚಿಣ್ಣ ಶ್ರೀ ಕೆ. ನಾಗರಾಜ್, ಇ.ಜಿ. ಶಂಕರರಾಜು ಎಂ. ಬಾಲಾ ಎಂಬುವರು ಇಂದು ಎಂ. ಬಿ. ಬಿ. ಎಸ್. ಪ್ಯಾಸ್ ಮಾಡಿ ವೈದ್ಯಾಧಿಕಾರಿಗಳಾಗಿದ್ದಾರೆ. ಕೊನೆಯ ಶ್ರೀ ಎಂ ಬಾಲಾ ಅವರು ರಕ್ಷಣಾಪಡೆಯಲ್ಲಿ ವೈದ್ಯಾಧಿಕಾರಿಗಳು.

ಮಕ್ಕಳ ಆರೋಗ್ಯದ ಬಗ್ಗೆ ದೇವಸ್ಥಾನದ ಅಧಿಕಾರಿಗಳು ತುಂಬ ಆಸ್ಥೆ ವಹಿಸಿದ್ದಾರೆ. ಪ್ರತಿ ವಾರಕ್ಕೊಮ್ಮೆ ಮಕ್ಕಳ ಆರೋಗ್ಯವನ್ನು ಪರೀಕ್ಷಿಸಿ ಔಷಧೋಪಚಾರ ನೀಡಲಾಗುತ್ತಿದೆ. ಆ ವೈದ್ಯರ ನಡವಳಿಕೆ ಎಷ್ಟು ಸೌಜನ್ಯಪೂರ್ಣ ಎಂದರೆ ಮಕ್ಕಳಿಗೆ ತಾವು ಅನಾಥರು ಎಂಬುದೇ ಮರೆತು ಹೋದಂತಿರುತ್ತದೆ. ಇಲ್ಲಿಯ ಮಕ್ಕಳನ್ನು ಕಂಡವರು ಯಾರೂ ದುಃಖದ ನಿಡಿದುಸಿರು ಬಿಡಲಾರರು. ಆನಂದ ಹೊಂದಿ ಹೊರಹೊರಡುತ್ತಾರೆ.

ಜೀವನ ದೇವಸಾನ್ನಿಧ್ಯದಲ್ಲಿ ತುಂಬ ಹಗುರ. ದುಃಖದಿಂದ ಭಾರವಾದ ದೇಹ ಮನಸ್ಸುಗಳೂ ಅವನ ಕೃಪೆಯಿಂದ ಹಗುರಾಗಿ ಹಕ್ಕಿಯಂತೆ ಹಾರುತ್ತವೆ. ಅನಾಥನಾದ ಗಜರಾಜನ ಆರ್ತ ಕರೆಗೆ ಓಗೊಟ್ಟ ಆ ಅನಾಥರಕ್ಷಕ ತನ್ನ ಆಶ್ರಯದಲ್ಲಿ ಅನಾಥ ಮಕ್ಕಳನ್ನು ಸನಾಥರಂತೆ ಆನಂದ ಸಂಭ್ರಮಗಳಿಂದ ಇಟ್ಟುಕೊಂಡಿದ್ದಾನೆ. ಅವನ ದಿವ್ಯ ಮಮತೆಯ ಸಂದೇಶವನ್ನು ಬಾಲಮಂದಿರದ ಒಂದು ಫಲಕ ಹೀಗೆ ನುಡಿಯುತ್ತದೆ:

"There is only one Relegion—
The Relegion is love
There is only one Caste
The Caste of humanity
There is only one Language.
The Language of heart
There is only one God,
He is Omnipresent"

ಹೌದು, ಅತನೇ

"ವಿನಾ ವೆಂಕಟೇಶಂ ನ ನಾಥೋ ನ ನಾಥಃ
ಸದಾ ವೆಂಕಟೇಶಂ ಸ್ಮರಾಮಿ ಸ್ಮರಾಮಿ
ಹರೇ ವೆಂಕಟೇಶ ಪ್ರಸೀದ ಪ್ರಸೀದ
ಪ್ರಿಯಂ ವೆಂಕಟೇಶ ಪ್ರಯಚ್ಛ ಪ್ರಯಚ್ಛ"

# ದಿವ್ಯದೇಶವಾಸ

ಶ್ರೀ ತಿ. ಅ. ಸಂಪತ್ಕುಮಾ - ರಾಚಾರ್ಯ

ಭಗವಂತನು ಅತ್ಯಾದರದಿಂದ ಅರ್ಚಾರೂಪಿಯಾಗಿ ಬಿಜಯ ಮಾಡಿಸಿರುವ ಕ್ಷೇತ್ರಗಳನ್ನು ದಿವ್ಯದೇಶಗಳೆಂದು ನಮ್ಮ ಹಿರಿಯರು, ಕರೆಯುವರು. "ತ್ರಿಪಾದಸ್ಯಾಮೃತಂ ದಿವಿ" ಎಂಬ ವೇದವಾಕ್ಯದಲ್ಲಿ ದಿವಿ ಎಂಬುದಕ್ಕೆ ಪರಮಪದ (ಶ್ರೀವೈಕುಂಠ) ಎಂದರ್ಥ. ದಿವ್ಯದೇಶವೆಂದರೆ ಪರಮಪದದ ಅಂಶವಾದ ಕ್ಷೇತ್ರವೆಂದರ್ಥವಾಯಿತು ಎಂದರೆ ಈ ಕ್ಷೇತ್ರಗಳು ಪ್ರಕೃತಿಮಂಡಲದಲ್ಲಿರುವ ಇತರ ಊರುಗಳಂತಲ್ಲದೆ ದೇವರ ನಿವಾಸಕ್ಕೆಂದು ಪರಮಪದದಿಂದ ತರಲ್ಪಟ್ಟ ಒಂದು ಭಾಗವೆಂದು ಹೇಳಿದಂತಾಯಿತು. ಪರಮಾತ್ಮನು ಭಕ್ತರನ್ನನು ಗ್ರಹಿಸಲೆಂದು ಭೂಲೋಕದಲ್ಲವತರಿಸಿದರೆ, ಅವನ ಪರಿಜನಗಳೂ, ಶ್ರೀ ಮಹಾಲಕ್ಷ್ಮಿಯೂ ಸಹ, ತಾವೂ ತಕ್ಕ ರೂಪವನ್ನು ಧರಿಸಿ ಅವನ ಸಂಗಡಲೇ ಅವತರಿಸುವರೆಂದು ಪುರಾಣಗಳು ಹೇಳುತ್ತವೆ. ಅದರಂತೆ ಅವನ ವಾಸಸ್ಥಾನವಾದ ಶ್ರೀ ವೈಕುಂಠ ಲೋಕವೂ ಸಹ ಇಲ್ಲಿಗೆ ಬರುವುದೆಂದು ತಿಳಿಯುವುದರಲ್ಲಿ ಕಷ್ಟವೇನಿರುವುದಿಲ್ಲ. ಇದರಿಂದಲೇ ಎಷ್ಟೋ ಕ್ಷೇತ್ರಗಳಿಗೆ ಭೂವೈಕುಂಠವೆಂದೇ ಹೆಸರು ಬಂದಿರುತ್ತದೆ. ಆದುದರಿಂದ ಈ ಕ್ಷೇತ್ರಗಳ ಮಹಿಮೆಯು ವಾಚಾಮಗೋಚರವೆಂದು ತಿಳಿಯಬೇಕು.

ಸಂಸಾರಸಾಗರದಿಂದ ಪಾರಾಗಿ ಶ್ರೀ ವೈಕುಂಠವನ್ನು ಸೇರಿ ಅಲ್ಲಿ ಪರಮಾತ್ಮನನ್ನು ಸೇವಿಸಿ ಕೃತಾರ್ಥರಾಗಬಯಸುವ ಮುಮುಕ್ಷುಗಳೆಂಬ ಜನರು, ಆ ಭಾಗ್ಯವು ದೊರಕುವವರೆಗೂ ದಿವ್ಯದೇಶಗಳಲ್ಲಿ ವಾಸಮಾಡುತ್ತಾ ಆ ಕ್ಷೇತ್ರನಾಥನನ್ನು ಸೇವಿಸುತ್ತಿರಬೇಕೆಂಬ ಕಟ್ಟಳೆಯೂ ಏರ್ಪಟ್ಟಿರುತ್ತದೆ. ಶ್ರೀ ವೈಕುಂಠವನ್ನು ಹೊಂದಬೇಕೆಂಬ ನಿಜವಾದ ಅಪೇಕ್ಷೆಯುಳ್ಳ ಭಕ್ತನು, ಅದರ ಅವತಾರವಾಗಿ ಈ ಮಾನವ ಶರೀರದಲ್ಲೇ ಅನುಭ–ಸಬಹುದಾದ ದಿವ್ಯದೇಶವನ್ನು ಬಿಟ್ಟಿರಲು ಸಾಧ್ಯವೆ? ಎಂದಿಗೂ ಇಲ್ಲ. ತಿರುಮಂಗೈಯಾಳ್ವಾರ್ ಎಂಬ ಭಕ್ತಶಿಖಾಮಣಿಯು "ಶಿರಿಯ ತಿರುಮಡಲ್" ಎಂಬ ಸುಂದರವಾದ ಪ್ರಬಂಧದಲ್ಲಿ "ಈ ಭೂಲೋಕದಲ್ಲಿದ್ದುಕೊಂಡೇ ದಿವ್ಯದೇಶಗಳಲ್ಲಿ ದೇವರನ್ನು ಸೇವಿಸುವುದೇ ನಿಜವಾದ ಮೋಕ್ಷವು. ಇದನ್ನು ಬಿಟ್ಟು, ಯಾವಾಗಲೋ ಮರಣವನ್ನು ಹೊಂದಿ, ಅರ್ಚಿರಾದಿ ಮಾರ್ಗವೆಂಬ ದಾರಿಯಲ್ಲಿ ಪ್ರಯಾಣಮಾಡಿ, ಶ್ರೀ ವೈಕುಂಠವೆಂಬ ಲೋಕವನ್ನು ಹೊಂದಿ, ಅಲ್ಲಿ ಬ್ರಹ್ಮಾನಂದವೆಂಬ, ಯಾರೂ ಕಂಡು ಕೇಳದ ಯಾವುದೋ ಸುಖವನ್ನನುಭವಿಸುವೆವೆಂಬುದು ಮೂರ್ಖರ ವಾದ. ಮಾಂಸಾರ್ಥಿಯಾದವನು ಕೈಯಲ್ಲಿರುವ ನವಿಲನ್ನು ಬಿಟ್ಟು ಎಲ್ಲೋ ದೂರದಲ್ಲಿ ದೊಡ್ಡ ಮರದ ತುದಿಯಲ್ಲಿ ಕುಳಿತಿರುವ ಕಾಗೆಯನ್ನರಸಿಕೊಂಡು ಹೋಗುವಂತೆ ಬುದ್ಧಿಯಿಲ್ಲದವರ ಕಾರ್ಯ" ಎಂದು ಹಾಡಿರುವನು.

ಇದರಿಂದ, ನಮ್ಮ ಹಿರಿಯರು ದಿವ್ಯದೇಶವಾಸವನ್ನು "ಸಶರೀರಮೋಕ್ಷ" ವೆಂದೇ ಭಾವಿಸಿರುವರೆಂಬುದು ತಿಳಿದುಬರುತ್ತದೆ, ಆದುದರಿಂದಲೇ ಅವರು ಜನಗಳಿಗೆ ಹೀಗೆಲ್ಲಾ ಉಪದೇಶ ಮಾಡುವರು--

ಯತ್ಕಿಂಚಿದಪಿ ಕುರ್ವಾಣಃ ವಿಷ್ಣೋರಾಯತನೇ ವಸೇತ್ ।
ನ ಕಿಂಚಿದಪಿ ಕುರ್ವಾಣಃ ವಿಷ್ಣೋರಾಯತನೇ ವಸೇತ್ ॥

ಇದರ ತಾತ್ಪರ್ಯವೇನೆಂದರೆ— "ಒಬ್ಬನು ಯಾವ ವಿಧವಾದ ಕಾರ್ಯವನ್ನು ಮಾಡುತ್ತಿದ್ದರೂ ದಿವ್ಯದೇಶದಲ್ಲಿ ವಾಸಮಾಡಬೇಕು; ಏನನ್ನೂ ಮಾಡದಿದ್ದರೂ ದಿವ್ಯದೇಶದಲ್ಲಿ ವಾಸಮಾಡಬೇಕು." ಶ್ರೀ ರಾಮಾನುಜಾಚಾರ್ಯರು ತಮ್ಮ ಅಂತಿಮ ಕಾಲದಲ್ಲಿ ಶಿಷ್ಯರಿಗೆ ಚರಮ ಸಂದೇಶವನ್ನು ಕೊಡುತ್ತಾ, ಮತ್ತೇನೂ ಸಾಧ್ಯವಿಲ್ಲದಿದ್ದರೆ ಕನಿಷ್ಠಪಕ್ಷ, "ಕುಟಿಂ ಕೃತ್ವಾ ಯದುಗಿರಿ ತಟೇ ನಿತ್ಯವಸತಿಃ" ಎಂದರೆ (ಈಗ ಮೇಲ್ಕೋಟೆಯೆಂದು ಕರೆಯಲ್ಪಡುವ) ಯದುಗಿರಿಯ ಬಳಿ ಒಂದು ಗುಡಿಸಲನ್ನು ಕಟ್ಟಿಕೊಂಡು ಅಲ್ಲೇ ನಿತ್ಯವಾಸವನ್ನು ಮಾಡಿರಿ" ಎಂದು ಅಪ್ಪಣೆ ಮಾಡಿದರು. ಶ್ರೀ ರಂಗನಾಥನೂ ಸಹ ಅವರಿಗೆ, "ಯಾವಚ್ಛರೀರ ಪಾತಮತ್ರೈವ ಶ್ರೀರಂಗೇ ಸುಖಮಾಸ್ಸ್ವ" (ಶರೀರವನ್ನು ಬಿಡುವವರೆಗೆ ಇಲ್ಲೇ, ಈ ಶ್ರೀರಂಗ ಕ್ಷೇತ್ರದಲ್ಲೇ ಸುಖವಾಗಿ ವಾಸಮಾಡಿರಿ) ಎಂದು ಅಪ್ಪಣೆ ಕೊಡಿಸಿದುದಾಗಿ ಶರಣಾಗತಿಗದ್ಯದಲ್ಲಿ ವಿವರಿಸಲ್ಪಟ್ಟಿರುತ್ತದೆ.

ಹೀಗೆ ದಿವ್ಯದೇಶವು ಭೂವೈಕುಂಠವೆಂಬುದನ್ನು ತಿಳಿದುಕೊಂಡ ಮೇಲೆ ಅಲ್ಲಿ ವಾಸಮಾಡುತ್ತಿರುವ ಜನರು ಎಲ್ಲರಂತೆ ಪ್ರಾಕೃತಜನರಲ್ಲವೆಂದೂ ಶ್ರೀ ವೈಕುಂಠದಿಂದಲೇ ಭಗವಂತನ ಜತೆಯಲ್ಲಿ ಬಂದವತರಿಸಿದ ನಿತ್ಯಸೂರಿಗಳೋ ಅಥವಾ ಮುಕ್ತಪುರುಷರೋ ಆಗಿರಬೇಕೆಂಬುದನ್ನು ತಿಳಿಯಲು ಹೆಚ್ಚು ಕಷ್ಟವಾಗದು. ಜನರು ಮಾತ್ರವಲ್ಲ; ಅಲ್ಲಿರುವ ಸ್ಥಾವರಜಂಗಮ ರೂಪವಾದ ಎಲ್ಲವೂ ಅಪ್ರಾಕೃತ ಪದಾರ್ಥಗಳೇ ಎಂದೂ ಹಿರಿಯರು ಹೇಳುವರು. ಶ್ರೀ ಪರಾಶರಭಟ್ಟರೆಂಬ ಆಚಾರ್ಯರು ಶ್ರೀರಂಗರಾಜಸ್ತವವೆಂಬ ಸುಂದರವಾದ ಸ್ತೋತ್ರದಲ್ಲಿ

ಅಹೃತ್ಯಸಹಜದಾಸ್ಯಾಃ ಸೂರಯಃ ಸ್ರಸ್ತಬಂಧಾಃ
ವಿಮಲಚರಮದೇಹಾ ಇತ್ಯಮೀ ರಂಗಧಾಮ
ಮಹಿತ ಮನುಜತಿರ್ಯಕ್ ಸ್ಥಾವರತ್ವಾಃ ಶ್ರಯನ್ತೇ
ಸುನಿಯತಮಿತಿಹಸ್ಮ ಪ್ರಾಹುರೇಭ್ಯೋ ನಮಃಸ್ತಾತ್ ॥ (1-33)

ಎಂದು ಹಾಡಿರುತ್ತಾರೆ. ಇದರ ತಾತ್ಪರ್ಯವೇನೆಂದರೆ — "ಯಾವಾಗಲೂ ಭಗವಂತನ ದಾಸ್ಯದಿಂದ ಹೊರಗಾಗದಿರುವ ನಿತ್ಯಸೂರಿಗಳೂ, ಸಂಸಾರಬಂಧನದಿಂದ ಪಾರಾಗಿ ಮೋಕ್ಷಸಾಮ್ರಾಜ್ಯವನ್ನು ಹೊಂದಿದವರೂ, ಸಂಸಾರದಲ್ಲೇ ಇರುತ್ತಿದ್ದರೂ ದೇವರ ವಿಶೇಷ ಕಟಾಕ್ಷಕ್ಕೆ ಪಾತ್ರರಾಗಿ ಈ ಶರೀರವನ್ನು ಬಿಟ್ಟಕೂಡಲೆ ಮೋಕ್ಷಸಾಮ್ರಾಜ್ಯವನ್ನು ಹೊಂದಲು ಸಿದ್ಧರಾಗಿರುವ ಮುಮುಕ್ಷುಗಳೂ ಸಹ ಶ್ರೇಷ್ಠವಾದ ಮನುಷ್ಯ ಪಶುಪಕ್ಷಿ ಮರಗಿಡ ಮುಂತಾದ ಜನ್ಮಗಳನ್ನು ಪಡೆದು ಈ ಶ್ರೀರಂಗವೆಂಬ ದಿವ್ಯಕ್ಷೇತ್ರದಲ್ಲಿ ವಾಸಮಾಡುತ್ತಿರುವರು. ಇವರನ್ನೆಲ್ಲಾ ನಮಸ್ಕರಿಸುವೆವು" ಎಂದು. ಇದರಿಂದ ದಿವ್ಯದೇಶದಲ್ಲಿರತಕ್ಕ ಎಲ್ಲಾ ಪದಾರ್ಥಗಳೂ ದಿವ್ಯವಾದುವು, ನಾವು ಪೂಜಿಸಬೇಕಾದುವು ; ಯಾವುದೂ ತೆಗಳತಕ್ಕ ಪ್ರಾಕೃತ ವಸ್ತುವಲ್ಲ ಎಂದು ತಿಳಿಯುತ್ತದೆ. ಆದುದರಿಂದಲೇ ಇದೇ ಆಚಾರ್ಯರು ಶ್ರೀರಂಗನಾಥಸ್ತೋತ್ರವೆಂಬ ಮತ್ತೊಂದು ಸ್ತುತಿಯಲ್ಲಿ

ನಜಾತು ಪೀತಾಮೃತ ಮೂರ್ಛಿತಾನಾಂ
ನಾಕ್ಯಾಕಸಾಂ ನಂದನ ವಾಟಿಕಾಸು
ರಂಗೇಶ್ವರ ! ತ್ವತ್ಪುರಮಾಶ್ರಿತಾನಾಂ
ರಥ್ಯಾಶುನಾಮನ್ಯತಮೋ ಭವೇಯಮ್ ॥

ಎಂದು ಹಾಡಿರುವರು. ಇದರ ಭಾವ ಸ್ವರ್ಗಲೋಕವನ್ನು ಸೇರಿ ಅಲ್ಲಿರುವ ನಂದನವೆಂಬ

ದೇವೋದ್ಯಾನದ ಕ್ರೀಡಾಸ್ಥಾನಗಳಲ್ಲಿ ಮಧುವನ್ನು ಕುಡಿದು ಸೊಕ್ಕಿ ಬಿದ್ದಿರುವ ದೇವತೆಗಳಲ್ಲಿ ಒಬ್ಬನಾಗಿ ನಾನೆಂದಿಗೂ ಹುಟ್ಟುವುದು ಬೇಡ. ಮತ್ತೇನೆಂದರೆ. ಎಲೈ ಶ್ರೀರಂಗನಾಥನೆ ! ನಿನ್ನ ದಿವ್ಯ ನಗರದ ಬೀದಿಗಳಲ್ಲಿ ಅಲೆಯುತ್ತಿರುವ ಒಂದು ನಾಯಾಗಿ ಹುಟ್ಟುವಂತಾಗಲಿ" ಇದರಿಂದ ಶ್ರೀರಂಗಕ್ಷೇತ್ರದಲ್ಲಿ ದೊರೆಯುವ ಒಂದು ತಿರ್ಯಗ್ಜನ್ಮವು ದೇವಜನ್ಮಕ್ಕಿಂತಲೂ ಶ್ರೇಷ್ಠವೆಂದು ತಿಳಿಯುವುದು.

ಈ ಆಚಾರ್ಯರಿಗೆ ದಾರಿ ತೋರಿದವರು ಶ್ರೀ ಕುಲಶೇಖರ ಆಳ್ವಾರ್ ಎಂದು ಹೇಳಬೇಕು. ಅವರು 'ಪೆರುಮಾಳ್ ತಿರುಮೊಳಿ' ಎಂಬ ತಮ್ಮ ಸುಂದರವಾದ ಗ್ರಂಥದ ನಾಲ್ಕನೆಯ ದಶಕದಲ್ಲಿ "ನನಗೆ, ಸಮಸ್ತ ದೇವಗಣ ಸೇವಿತವಾದ ಶ್ರೀ ವೆಂಕಟಾಚಲದಲ್ಲಿ ಒಂದು ಕೊಕ್ಕರೆ, ಮೀನು, ಒಬ್ಬ ಸೇವಕ, ಸಂಪಿಗೆ ಮರ, ಮುಳ್ಳು ಪೊದರು, ಗಿರಿನದಿ, ಎಲ್ಲರೂ ನಡೆಯತಕ್ಕ ದಾರಿ, ಬೆಟ್ಟದ ಶಿಖರ, ಹೊಸಲು, ಅಥವಾ ಮತ್ತೆ ಯಾವುದೇ ಜನ್ಮ ದೊರೆತರೆ ಅದು ಮೂರು ಲೋಕಗಳ ಐಶ್ವರ್ಯಕ್ಕೂ ಮಿಗಿಲಾದುದು" ಎಂದು ಹಾಡಿರುವರು.

ಇಲ್ಲಿ, ಯಾವುದಾದರೊಂದು ಜನ್ಮವೆಂಬುದಕ್ಕೆ ಅರ್ಥವೇನೆಂದು ರಸಿಕರಾದ ಆಚಾರ್ಯರು ವಿಮರ್ಶೆ ಮಾಡಿ ಕೆಲವು ಸುಂದರವಾದ ಭಾವಗಳನ್ನು ತೋರಿರುವರು. ಅವನ್ನು ಈಗ ಸ್ವಲ್ಪ ವಿವರಿಸುವೆವು. ಈಗಾಗಲೇ ತಿಳಿಸಿದಂತೆ ದಿವ್ಯದೇಶದಲ್ಲಿರುವ ಎಲ್ಲಾ ಪದಾರ್ಥಗಳೂ ನಿತ್ಯ ಮುಕ್ತ ಮುಮುಕ್ಷುಗಳೆಂಬ ಪರಮಭಕ್ತರ ಅವತಾರವಾದುದರಿಂದ, ಅವುಗಳಲ್ಲಿ ಇದೇ ಹೆಚ್ಚು ಅದು ಕಡಿಮೆ ಎಂಬ ಭೇದಭಾವವೇ ಇಲ್ಲದೆ, ಎಲ್ಲವೂ ಪರಮಾದರಣೀಯವಾದುವು. ಆದುದರಿಂದ ಅಂತಹ ಜನ್ಮಗಳಲ್ಲಿ ಯಾವುದು ದೊರೆತರೂ ಕೊರತೆಯೇನಿಲ್ಲ ; ಯಾವುದಾದರೂ ದೊರೆತರೆ ಸಾಕು—ಎಂಬುದೇ ಆಳ್ವಾರರ ಪ್ರಾರ್ಥನೆ. ಕೊಕ್ಕರೆ, ಮೀನು ಎಂದು ಮುಂತಾಗಿ ಕೆಲವು ಪದಾರ್ಥಗಳ ಹೆಸರನ್ನು ಹೇಳಿದುದು ಉದಾಹರಣೆಗಾಗಿ ; ಇಂತಹುದೇ ಜನ್ಮವು ಬೇಕೆಂಬ ನಿರ್ಬಂಧದಿಂದಲ್ಲ. ಈ ಅರ್ಥವನ್ನೇ ಕಡೆಗೆ 'ಏನಾದರೂ ಆಗುವೆನು' ಎಂದು ತಿಳಿಸಿದರು.

ಅಥವಾ, ಕೊಕ್ಕರೆ, ಮೀನು ಮುಂತಾದ ಜನ್ಮಗಳಲ್ಲಿ ಒಂದೊಂದು ಬಗೆಯ ಕಷ್ಟವು ತೋರಿಬಂದುದರಿಂದ, ನಾವಾಗಿ ಯಾವ ಜನ್ಮವನ್ನು ಬೇಡಿಕೊಂಡರೂ ಅದರಲ್ಲಿ ಏನಾದರೊಂದು ಕೊರತೆಯಿದ್ದೇ ತೀರುವುದು. ಮಂದಮತಿಗಳಾದ ನಾವು ಇಂತಹುದೇ ಒಳ್ಳೆಯಹೆಂದು ಪರೀಕ್ಷಿಸಿ ಆರಿಸಿಕೊಳ್ಳಲಾರೆವು. ಆದುದರಿಂದ ಈ ಭಾರವನ್ನು ಆ ಪರಮಾತ್ಮನ ಮೇಲೆಯೇ ಹೊರಿಸುವುದು ಒಳ್ಳೆಯದು. ಹಿರಣ್ಯಕಶಿಪು, ರಾವಣ ಮುಂತಾದವರು ತಮಗೆ ಮರಣವೇ ಉಂಟಾಗಕೂಡದೆಂದು ಬಗೆದು ಅದಕ್ಕಾಗಿ ಬಹಳ ಜಾಣತನದಿಂದ ವರವನ್ನು ಬೇಡಿಕೊಂಡರು. ಆದರೆ ಅವರ ಇಷ್ಟವೇನೋ ನೆರವೇರಲಿಲ್ಲ. ದೇವರು ಅವರು ಪಡೆದಿದ್ದ ವರವನ್ನು ಸುಳ್ಳಾಗಿಸದೆಯೇ ಅಡ್ಡದಾರಿಯನ್ನು ಹಿಡಿದು ಅವರನ್ನು ಕೊಂದು ಕೆಡಹಿದನು. ಆದುದರಿಂದ ಬುದ್ಧಿವಂತರಾದವರು ನನಗೆ ಇದೇ ವರ ಬೇಕು ಎಂದು ಯಾವಾಗಲೂ ಬೇಡಿಕೊಳ್ಳಬಾರದು. ಈ ರಹಸ್ಯವನ್ನರಿತೇ ಜಿತಂತೇ ಸ್ತೋತ್ರದಲ್ಲಿ ಭಕ್ತನು ಹೀಗೆ ಬೇಡಿಕೊಳ್ಳುತ್ತಾನೆ-

ಕ್ವಾಹಮತ್ಯಂತ ದುರ್ಬುದ್ಧಿಃ ಕ್ವಚಾತ್ಮಹಿತ
ವೀಕ್ಷಣಮ್ ।
ಯದ್ಧಿತಂ ಮಮ ದೇವೇಶ ತದಾಜ್ಞಾಪಯ
ಮೋಚ್ಯುತ ॥

ಇದರ ತಾತ್ಪರ್ಯ– "ಎಲೈ ಭಕ್ತರನ್ನು ಕೈಬಿಡದ ಸ್ವಾಮಿಯೆ ! ನಾನು ಮತಿಹೀನನಾದುದರಿಂದ ನನಗೆ ಯಾವುದು ಒಳ್ಳೆಯದು ಎಂಬುದನ್ನು ಹೇಗೂ ತಿಳಿಯಲಾರೆನು, ಆದುದರಿಂದ ನೀನೇ ವಿಚಾರಮಾಡಿ ನನಗೆ ಯಾವುದು ಒಳ್ಳೆಯದೋ ಅದನ್ನು ದಯಪಾಲಿಸುವವನಾಗು"ಎಂದುವೈದ್ಯನ ಬಳಿಗೆ ಹೋಗುವ ರೋಗಿಯು ತನ್ನ ವ್ಯಾಧಿಯ ಬಗೆಯನ್ನು ತಿಳಿಸಬೇಕಲ್ಲದೆ, ಇಂತಹ ಔಷಧವನ್ನೇ ಕೊಡಬೇಕೆಂದೋ, ಇಂತಹುದೇ ಪಥ್ಯವಿರಿಸಬೇಕೆಂದೋ ಕೇಳಿಕೊಳ್ಳಲಾದೀತೆ? ತಕ್ಕ ಔಷಧವನ್ನು ಕೊಟ್ಟು ನನ್ನ ಕಷ್ಟವನ್ನು ಬಿಡಿಸಿರೆಂದಷ್ಟೇ ಅಲ್ಲವೆ ಪ್ರಾರ್ಥಿಸಬೇಕಾದುದು ? ಇದರಂತೆ ನಿಜವಾದ ಭಕ್ತನು ದೇವರ ಬಳಿಯಲ್ಲಿ ಇಂತಹುದೇ ವಸ್ತುವು ಬೇಕೆಂದು ಕೇಳಿಕೊಳ್ಳದೆ, ತನ್ನನ್ನು ಕಾಪಾಡಬೇಕೆಂದು ಮಾತ್ರ ಬೇಡಿಕೊಳ್ಳಬೇಕು. ಇದನ್ನೇ ಆಳ್ವಾರರು ಮಾಡಿದರು.

ಅಥವಾ, 'ಏನಾದರೂ ಆಗುವೆನು' ಎಂಬ ಮಾತಿಗೆ, "ಸ್ವಯಂ ಶ್ರೀನಿವಾಸನೇ ಆಗಿರಬೇಕೆಂದರೂ ಆಗುವೆನು, ಹೇಗಾದರೂ ತಿರುಮಲೆಯಲ್ಲಿ ವಾಸ ದೊರೆತರೆ ಸಾಕು" ಎಂಬುದೇ ಅರ್ಥವೆಂದು ತಿರುಮಲೈ ಯಲ್ಲಿ ನಿತ್ಯವಾಸಮಾಡಿ ದೇವನ್ನು ಸೇವಿಸಿ ಧನ್ಯರಾದ ಶ್ರೀ ಅನನ್ತಾರ್ಯರೆಂಬ, ಆಚಾರ್ಯರು ಹೇಳಿದರಂತೆ. ಈ ಅರ್ಥವು ಸ್ವಲ್ಪ ವಿಚಿತ್ರವಾಗಿ ತೋರುವುದು. ತಾನೇ ಶ್ರೀನಿವಾಸನಾಗುವೆನೆಂದು ಹೇಳುವ ಆಳ್ವಾರರು, ನಿಜವಾದ ದೇವರನ್ನು ತಿರುಮಲೆಯಿಂದ ಓಡಿಸಿಬಿಟ್ಟು ಆ ಸ್ಥಾನದಲ್ಲಿ ತಾವೇ ನಿಂತು ಎಲ್ಲರಿಂದಲೂ ಸೇವೆಯನ್ನು ಕೈಗೊಳ್ಳಬೇಕೆಂದು ಅಪೇಕ್ಷಿಸುವರೆ ? ಈ ಆಶೆಯು ನ್ಯಾಯವಾದುದೇ? ದೈವ ದ್ರೋಹವಲ್ಲವೆ ? ಅಥವಾ ಅದ್ವೈತಿಗಳು ಹೇಳುವಂತೆ, ಅಹಂಬ್ರಹ್ಮಾಸ್ಮಿ ಎಂದು ಆಳ್ವಾರರು ಹೇಳಬಯಸುವರೆ? ಎಂದೆಲ್ಲಾ ಹಲವು ಬಗೆಯ ಪ್ರಶ್ನೆಗಳು ನಮ್ಮ ಮನಸ್ಸಿನಲ್ಲುದಿಸುವುವು. ಆದರೆ ನಿಜವನ್ನು ಹೇಳಿದರೆ, ಇದಾವುದೂ ಬೇಕಿಲ್ಲ. ಆಳ್ವಾರರ ಮನಸ್ಸಿನಲ್ಲಿ ಈ ಬಗೆಯ ಭಾವವಾವುದೂ ಇರುವುದಿಲ್ಲ. ಅವರ ಅಭಿಪ್ರಾಯದಲ್ಲಿ ತಾವೇ ದೇವರಾಗಿರುವುದು ಒಳ್ಳೆಯದೇನಲ್ಲ. ದೇವರ ಸೇವಕರಾಗಿಯೇ ಇರಬೇಕೆಂಬ ಹಟವನ್ನು ತೊಟ್ಟ ಅವರು ತಾವೇ ದೇವರಾಗಿರುವುದನ್ನು ಹೇಗೂ ಸಮ್ಮತಿಸರು. ಭಕ್ತರಿಗೆ ದೇವರ ಸೇವೆಯಲ್ಲಿ ದೊರೆಯುವ ಆನಂದವು, ಸ್ವಯಂ ದೇವರಾಗಿದ್ದು ಮತ್ತೊಬ್ಬರಿಂದ ಸೇವೆಯನ್ನು ಪಡೆಯುವುದರಲ್ಲಿ ಹೇಗೂ ದೊರಕಿಲಾರದು. ಒಬ್ಬನಿಗೆ ಸಿಹಿಯಾದ ಪದಾರ್ಥವೆಂದರೆ ಬಹಳ ಆಸೆ; ಎಷ್ಟು ತಿಂದರೂ ತೃಪ್ತಿಯಿಲ್ಲವೆಂದಿಟ್ಟುಕೊಳ್ಳಿ. ಅವನನ್ನು ಸಂತೋಷಪಡಿಸಲೆಂದು ಒಂದು ದೇವತೆಯು, "ಅಪ್ಪ! ನೀನೇ ಮಿಠಾಯಿಯ ಬೆಟ್ಟದ ರೂಪವನ್ನು ಹೊಂದಿ ಆನಂದಿಸು" ಎಂದು ವರವನ್ನು ಕೊಟ್ಟರೆ ಅದರಿಂದ ಆ ಮನುಷ್ಯನಿಗೆ ಸಂತೋಷವುಂಟಾದೀತೆ? ಹೇಗೂ ಉಂಟಾಗದು, ಮಿಠಾಯನ್ನು ತಿಂದು ತೇಗಬೇಕೆಂದಪೇಕ್ಷಿಸುವವನಿಗೆ ತಾನೇ ಮಿಠಾಯಿಯಾಗಿ ಪರಿಣಮಿಸುವುದರಿಂದ ಏನು ಲಾಭವಾಯಿತು ? ಇದರಂತೆ ಆಳ್ವಾರರಿಗೆ ತಾವೇ ಶ್ರೀನಿವಾಸನಾಗುವುದು ಬಕಮೀನಾದಿ ಜನ್ಮಗಳಿಗಿಂತಲೂ ನಿಹೀನವಾದ ಜನ್ಮವೇಸರಿ. ಆದರೂ ಅದನ್ನಪೇಕ್ಷಿಸಲು ಕಾರಣ, ಹೇಗಾದರೂ ತಿರುಮಲೆಯಲ್ಲಿ ನಿತ್ಯವಾಸಮಾಡುವ ಭಾಗ್ಯವು ದೊರೆಯಲೆಂಬುದೇ. ಎಂದರೆ, ತಿರುಮಲೆಯಲ್ಲಿ ನಿತ್ಯವಾಸ ಮಾಡುವ ಭಾಗ್ಯವು ದೊರೆಯುವುದಾದರೆ, ಅದಕ್ಕಾಗಿ ಎಂತಹ ಕಷ್ಟವನ್ನಾದರೂ ಪಡಲು, ಕಡೆಗೆ ಸ್ವಯಂ ದೇವರಾಗಿಯೂ ನಿಂತಿರಲೂ ತಾನು ಸಿದ್ಧವೆಂಬುದೇ ಆಳ್ವಾರರು ಪ್ರಕಟಪಡಿಸುವ ಭಾವವೆಂದರ್ಥವಾಯಿತು. ಇದರಿಂದ ದಿವ್ಯದೇಶವಾಸದಲ್ಲಿ ಅವರಿಗಿರುವ ಅಭಿನಿವೇಶವು ಎಷ್ಟು ಮಟ್ಟಿನದೆಂಬುದು ತಿಳಿದು ಬರುತ್ತದೆ.

ಶ್ರೀ ರಾಮಾನುಜಾಚಾರ್ಯರು ತಿರುಪತಿಗೆ ದಯಮಾಡಿಸಿದಾಗ, "ತಿರುಮಲೆಯೆಂಬುದು ಸಾಕ್ಷಾತ್ ಆದಿಶೇಷನ ಅವತಾರವೆಂದೂ, ಅದಕ್ಕಾಗಿಯೇ ಅದಕ್ಕೆ ಶೇಷಗಿರಿ, ಶೇಷಾದ್ರಿ ಎಂದೆಲ್ಲಾ ಹೆಸರಾಯಿತೆಂದೂ ಹಿರಿಯರು ಹೇಳುವರು. ಅದರಿಂದಲೇ ಆಳ್ವಾರುಗಳು ಸಹ ಅದನ್ನು ಕಾಲಿನಿಂದ ತುಳಿದು ಹತ್ತಲಿಷ್ಟಪಡದೆ ಬೆಟ್ಟದ ಅಡಿಯಲ್ಲೇ, ಆಳ್ವಾರ್ ತೀರ್ಥವೆಂದು ಪ್ರಸಿದ್ಧವಾದ ಸ್ಥಳದಲ್ಲಿ ನಿಂತು ಅಲ್ಲಿಂದಲೇ ದೇವರ ದರ್ಶನ ಮಾಡಿದರು. ಆ ಕಾರಣದಿಂದಲೇ ತಿರುಮಲೆಯಲ್ಲಿ ಯಾವ ಆಳ್ವಾರರ ವಿಗ್ರಹವೂ ಪ್ರತಿಷ್ಠಿಸಲ್ಪಡಲಿಲ್ಲ. ಹೀಗಿರುವಾಗ ನಾನು ಮಾತ್ರ ಪವಿತ್ರವಾದ ಈ

ಶ್ರೀಶೈಲವನ್ನು ಕಾಲಿನಿಂದ ತುಳಿಯಬಹುದೆ? ಬೇಡ. ಇಲ್ಲಿಂದಲೇ ದೇವರನ್ನು ನಮಸ್ಕರಿಸು ವೆನು" ಎಂದು ಹೇಳಿದರು. ಆಗ ಅವರ ಶಿಷ್ಯ ರಾದ ಅನನ್ತಾ‌ರ್ಯರು, "ಸ್ವಾಮಿ! ಸ್ವಾಮಿ! ತಾವು ಅಪ್ಪಣೆ ಕೊಡಿಸುವುದೇನೋ ಸರಿಯೆ. ಆದರೆ ತಾವು ಬೆಟ್ಟವನ್ನು ಹತ್ತುವುದಿಲ್ಲವೆಂದರೆ, ಆ ಮೇಲೆ ನಾವೂ ಹತ್ತಲಾರೆವು; ಅರ್ಚಕ ಪರಿಚಾ ರಕ ಮುಂತಾದವರೂ ಹತ್ತಲಾರರು. ಎಂದರೆ ದೇವರ ಪೂಜೆಯೇ ನಿಂತುಹೋಗುವುದು. ಈ ವಿಪತ್ತನ್ನು ಪರಿಹರಿಸಿ ದೇವರ ಪೂಜಾದಿಗಳು ಕ್ರಮವಾಗಿ ನಡೆಯುತ್ತಾ ಭಕ್ತರೂ ಹೆಚ್ಚು ಹೆಚ್ಚಾಗಿ ದೇವರ ಸೇವೆಯನ್ನು ಮಾಡಿ ಧನ್ಯರಾಗ ಬೇಕೆಂದು ಬಯಸುವಿರಾದರೆ, ತಾವು ಮೇಲೆ ದಯಮಾಡಿಸಲೇ ಬೇಕು" ಎಂದು ಬಿನ್ನವಿಸಿ ಕೊಂಡರು. ಆಚಾರ್ಯರೂ ಸಹ ಇದನ್ನು ಭಗವ ದಾಜ್ಞೆಯೆಂದೇ ಭಾವಿಸಿ, "ಸರಿ, ಭಗವಂತನ ಪ್ರೇರಣೆಯಿಂದ ನೀವು ಮಾಡುವ ಈ ಆಜ್ಞೆಯನ್ನು ನಾನು ಮೀರಲಾರೆನು. ಸಂಸಾರ ಬಂಧನದಿಂದ ಬಿಡಲ್ಪಟ್ಟ ಚೇತನನು ಅರ್ಚಿರಾದಿಮಾರ್ಗದಿಂದ ಶ್ರೀ ವೈಕುಂಠ ದಿವ್ಯಲೋಕವನ್ನು ಸೇರಿ, ಅಲ್ಲಿ ಸಾವಿರಕಾಲಮಂಟಪದಲ್ಲಿ ಆದಿಶೇಷನ ಮೇಲೆ ಬಿಜಯಮಾಡಿಸಿರುವ ಶ್ರಿಯಃಪತಿಯ ಬಳಿಗೆ ಸಾರಿ, ಆದಿಶೇಷನನ್ನು ಕಾಲಿನಿಂದ ತುಳಿದು ಹತ್ತಿಹೋಗಿ ದೇವರ ಮಡಿಲಲ್ಲಿ ಕುಳಿತುಕೊಳ್ಳುವ ನೆಂದು ಕೌಷೀತಕೀ ಉಪನಿಷತ್ತಿನ ಪರ್ಯಂಕವಿದ್ಯೆ ಎಂಬ ಭಾಗದಲ್ಲಿ ಹೇಳಿರುತ್ತದೆ. ಅದರಂತೆ ನಾನೂ ಈಗ ನಿಮ್ಮೆಲ್ಲರ ಅಪ್ಪಣೆಯಂತೆ ಶೇಷ ರೂಪಿಯಾದ ಈ ತಿರುಮಲೆಯನ್ನು ಹತ್ತಿ ಶ್ರೀ ಶ್ರೀನಿವಾಸನನ್ನು ಸೇವಿಸುವೆನು" ಎಂದು ಹೇಳಿ, ಆದರೂ ಬೆಟ್ಟದ ಮೇಲೆ ಮಲಮೂತ್ರಗಳನ್ನು ಬಿಡುವುದು ಸರಿಯಲ್ಲವೆಂದು ಬಗೆದು, ಶರೀರವನ್ನು ಶುದ್ಧಿಪಡಿಸಿಕೊಂಡು, ಹಾಗೂ ಅಡಿಯಿಟ್ಟು ಬೆಟ್ಟ ವನ್ನು ಹತ್ತಲಪೇಕ್ಷಿಸದೆ ಮೊಳಕಾಲುಗಳ ಸಹಾಯದಿಂದಲೇ ಹತ್ತಿದರೆಂದೂ, ಅನಂತರ ಗುರುಗಳ (ಶ್ರೀಶೈಲಪೂರ್ಣರ) ಅಪ್ಪಣೆಯಂತೆ ಅಲ್ಲಿ ಮೂರುದಿನಗಳು ತಂಗಿರಬೇಕಾಗಿಬರಲು ಅಷ್ಟುಕಾಲವೂ ಉಪವಾಸವನ್ನೇ ಮಾಡಿದರೆಂದೂ ಹಿರಿಯರು ಹೇಳುತ್ತಾರೆ. ಇದರಿಂದ ತಿರುಮಲೆಯ ವಿಷಯದಲ್ಲಿ ಅವರಿಗೆ ಎಷ್ಟೊಂದು ಗೌರವ ವಿತ್ತೆಂಬುದು ತಿಳಿದುಬರುತ್ತದೆ.

ಹೀಗೆ ಭೂವೈಕುಂಠವೆಂದು ಪ್ರಸಿದ್ಧವಾದ ಈ ದಿವ್ಯ ಕ್ಷೇತ್ರಗಳಲ್ಲಿ ಕಾಲದಿಂದ ಕಾಲಕ್ಕೆ ಮಹಿತಾ ತ್ಮರು ವಾಸಮಾಡುತ್ತ ಅವುಗಳ ಹಿರಿಮೆಯನ್ನು ಜಗತ್ತಿಗೆ ಸ್ಪಷ್ಟ ಪಡಿಸಿದ್ದರಿಂದಲೇ ಇಂದಿನವರಿಗೆ ಎಂದರೆ ಇಪ್ಪತ್ತನೆಯ ಶತಕದ ಭಾರತೀಯರಿಗೆ ಹೇಳಿಕೊಳ್ಳುವಂತಹ ಪರಂಪರೆ, ದೇವಾಲಯಗಳು ವಿಶೇಷ ಅರಿವೂ ಉಂಟಾಗಿದೆಯೆಂದು ಹೇಳಬರು ತ್ತದೆ. +

# ಶ್ರೀವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

# ಕಿಶೋರ ಜಗತ್



## ಗುರುಭಕ್ತಿ

ಗುರುವಿನಲ್ಲಿ ಭಕ್ತಿ ಇಡಬೇಕು. ಅವರ ಮಾತಿನಂತೆ ನಡೆಯಬೇಕು. ಇದರಲ್ಲಿ ಶ್ರೇಯಸ್ಸಿದೆ. ಸುಖವೂ ಇದೆ. ಇದೊಂದು ಬಹಳ ಕಾಲದಿಂದ ನಡೆದು ಬಂದ ಮಾತು.

ಒಂದು ಕಾಲದಲ್ಲಿ ಬಹು ಹಿಂದೆ ಧೌಮ್ಯ ಎಂಬ ಋಷಿ ಇದ್ದ. ಅವನು ಅನೇಕ ಶಿಷ್ಯರಿಗೆ ಪಾಠ ಹೇಳಿಕೊಡುತ್ತಿದ್ದ. ಅವನ ಶಿಷ್ಯರಲ್ಲಿ ಆರುಣ, ಬೈಂದ ಮತ್ತು ಉಪಮನ್ಯು ಎಂಬ ಮೂವರು ಪ್ರಮುಖ ವಿದ್ಯಾರ್ಥಿಗಳಿದ್ದರು. ಅನೇಕ ವರ್ಷ ಪಾಠ ಹೇಳಿಕೊಟ್ಟ ನಂತರ ಒಂದು ಸಾರಿ ಧೌಮ್ಯನು ತನ್ನ ಶಿಷ್ಯರುಗಳನ್ನು ಒಂದು ಸತ್ವ ಪರೀಕ್ಷೆಗೆ ಗುರಿ ಪಡಿಸಿದ.

ಅರುಣನನ್ನು ಕರೆದು ಅರುಣ, ಈ ರಾತ್ರಿ ಗದ್ದೆಗೆ ಕೆರೆಯಿಂದ ನೀರು ಹಾಯಿಸಬೇಕೆಂದು ಆಜ್ಞೆ ಮಾಡಿದ. ಅರುಣ ಅಗರಂತೆ, ಗದ್ದೆಗೆ ಹೋದ. ಕೆರೆಗಿಂತ ಗದ್ದೆ ಎತ್ತರದಲ್ಲಿದ್ದುದರಿಂದ ನೀರು ಹಾಯಲು ಸಾಧ್ಯವಿರಲಿಲ್ಲ. ಶಿಷ್ಯ ತುಂಬಾ ಆಲೋಚಿಸಿದ. ಕೆರೆಯ ಅಂಚಿನಲ್ಲಿ ಉದ್ದಕ್ಕೆ ಮಲಗಿದ. ಕೆರೆಯ ನೀರಿಗೆ ತಡೆ ಬಂದು ನೀರು ನಿಧಾನವಾಗಿ ಗದ್ದೆಯ ಮೇಲೆ ಹಾಯಲಾರಂಭಿಸಿತು. ಗುರುವು ಶಿಷ್ಯನನ್ನು ಹುಡುಕಿಕೊಂಡು ಬಂದ. ಕತ್ತಲಲ್ಲಿ ಆರುಣ ಕಾಣಲಿಲ್ಲ. 'ಆರುಣಾ, ಏ ಆರುಣಾ' ಎಂದು ಕೂಗಿದ. ಕೆರೆಯ ಅಂಚಿನಲ್ಲಿ ನೀರಿನಲ್ಲಿ ಮಲಗಿದ್ದ ಅರುಣ, 'ಗುರುಗಳೇ ನಾನು ಇಲ್ಲಿದ್ದೇನೆ'ಂದು ಉತ್ತರಿಸಿದ. ಅವನ ಸ್ಥಿತಿಯನ್ನು ನೋಡಿ, ಗುರು 'ಏಳಪ್ಪಾ, ನೀನು ಸತ್ವ ಪರೀಕ್ಷೆಯಲ್ಲಿ ಗೆದ್ದಿರುವೆ. ಇನ್ನು ನೀನು ಮನೆಗೆ ಹೋಗಬಹುದೆ'ಂದು ಅಪ್ಪಣೆ ಮಾಡಿದ.

ಬೈಂದನನ್ನು ಗುರು ಕರೆದು 'ನೀನು ಈ ದಿನ ಭತ್ತವನ್ನು ಒಟ್ಟಿ ಮನೆಗೆ ತರಬೇಕೆಂದು ಆಜ್ಞಾಪಿಸಿದ, ಶಿಷ್ಯ ಒಪ್ಪಿದ. ಆ ಬತ್ತವನ್ನು ಮನೆಗೆ ತರಲು ಒಂದು ಕೋಣ ಮತ್ತು ಒಂದು ಗಾಡಿ ಮಾತ್ರ ಆಶ್ರಮದಲ್ಲಿತ್ತು. ಭತ್ತವನ್ನು ಕೊಯ್ದು ಗಾಡಿಗೆ ಹೇರಿದ, ಗಾಡಿಯು ಏರಿಯಲ್ಲಿ ಹೋಗಲಾರದೆ ನಿಂತಿತು. ಕೋಣ ಗಾಡಿಯನ್ನು ಎಳೆಯಲಾರದಾಯಿತು. ಬೈಂದ ಇನ್ನೊಂದು ನೊಗಕ್ಕೆ ತನ್ನ ತಲೆಯನ್ನು ಕೊಟ್ಟ. ಗಾಡಿಯನ್ನು ಎಳೆಯುತ್ತಾ ಬರುವಾಗ ಚಕ್ರ ಕೆಸರಿನಲ್ಲಿ ಸಿಕ್ಕಿತು. ಅವನ ಕುತ್ತಿಗೆಗೆ ನೊಗ ಬಿಗಿಯಿತು. ಬೈಂದನಿಗೆ ಉಸಿರಾಡುವುದು ಕಷ್ಟವಾಯಿತು. ಗುರು ಗದ್ದೆಗೆ ಓಡಿಬಂದ. 'ಬೈಂದಾ, ಬೈಂದಾ' ಎಂದು ಕೂಗಿದ. ಶಿಷ್ಯನಿಗೆ ಉಸಿರು ಕಟ್ಟಿದ್ದರಿಂದ ಮಾತಾಡುವುದು ಕಷ್ಟವಾಯ್ತು. ಗುರು ಶಿಷ್ಯನ ಕಷ್ಟವನ್ನು ನೋಡಿ ನೊಗ ಕಳಚಿದ. 'ಬೈಂದ, ನೀನು ಪರೀಕ್ಷೆಯಲ್ಲಿ ಗೆದ್ದಿರುವೆ. ಇನ್ನು ನೀನು ಮನೆಗೆ ಹೋಗಬಹುದೆ'ಂದು ಅಪ್ಪಣೆ ಕೊಟ್ಟ.

ಮೂರನೆ ಶಿಷ್ಯ ಉಪಮನ್ಯುವಿನ ಪರೀಕ್ಷೆಯ ಸರತಿ ಬಂತು. ಉಪಮನ್ಯು ಬುದ್ಧಿವಂತನಲ್ಲ. ಆವನಿಗೆ ಯಾವಾಗಲೂ ಹಸಿವು, ತುಂಬಾ ಊಟ ಮಾಡುತ್ತಿದ್ದ. ಅವನು ಮೈ ತುಂಬಿಕೊಂಡು ಗಟ್ಟಿ ಮುಟ್ಟಾಗಿದ್ದ. ಬುದ್ಧಿವಂತನಲ್ಲವೆಂದೋ ಏನೋ, ಅವನಿಗೆ ದನ ಕಾಯುವ ಕೆಲಸ ವಹಿಸಲಾಗಿತ್ತು. ಉಪಮನ್ಯು ದನ ಕಾಯುತ್ತಿದ್ದ. ಹಸಿವಾಗುತ್ತದೆ ಎಂದು ಹೊತ್ತಿಗೆ ಮುಂಚೆಯೇ ಮನೆಗೆ ದನಗಳನ್ನು ಹೊಡೆದುಕೊಂಡು ಬರುತ್ತಿದ್ದ. ಗುರು ಶಿಷ್ಯನನ್ನು ಕರೆದು 'ಇನ್ನು ಮೇಲೆ ಹೀಗೆ ಹೊತ್ತಿಗೆ ಮುಂಚೆ ದನ ಹೊಡೆದುಕೊಂಡು ಬರಬೇಡ. ಹಸುಗಳನ್ನು ಚೆನ್ನಾಗಿ ಮೇಯಿಸಿ ಕರೆದುಕೊಂಡು ಬಾ' ಎಂದು ಹೇಳಿದ. ಗುರುವಿನ ಮಾತಿನಂತೆ, ಉಪಮನ್ಯು ಹಸುಗಳನ್ನು ಚೆನ್ನಾಗಿ ಮೇಯಿಸಿ, ಕತ್ತಲಾಗುವಹೊತ್ತಿಗೆ ಬರುತ್ತಿದ್ದ. ಗುರು ಕೇಳಿದ- "ಉಪಮನ್ಯು, ಊಟಕ್ಕೆ ಏನಾಡ್ತಿದ್ದೀಯಾ ?" ಶಿಷ್ಯನು 'ಹಸಿವೆಯಾದಾಗ ಅಲ್ಲಿ ಇಲ್ಲಿ ಭಿಕ್ಷೆ ಬೇಡಿ ತಿನ್ನುತ್ತೇನೆ'ಂದ. 'ಇನ್ನು ಮೇಲೆ ನೀನು ಭಿಕ್ಷೆ ಬೇಡಿದ್ದನ್ನು ಆಶ್ರಮಕ್ಕೆ ತಂದು ಹಾಕಬೇಕೆ'ಂದು ಗುರು ಕಟ್ಟಪ್ಪಣೆ ಮಾಡಿದ. ಇಷ್ಟು ನಿರ್ಬಂಧ ಹಾಕಿದರೂ. ಉಪಮನ್ಯು ನೋಡಲು ಮೈ ತುಂಬಿಕೊಂಡೇ ಇದ್ದ. ಗುರು ಅವನನ್ನು ಕರೆದು "ಈಗ ಊಟಕ್ಕೇನು ಮಾಡುವೆ?" ಎಂದು ಕೇಳಿದ. 'ಒಂದೆರಡು ಮನೆಗಳ ಭಿಕ್ಷೆಯನ್ನು ನಾನು ತಿನ್ನುತ್ತೇನೆ. ಉಳಿದಿದ್ದನ್ನು ಆಶ್ರಮಕ್ಕೆ ತಂದು ಹಾಕುತ್ತೇನೆ'ಂದ. ಗುರು,-ಹಾಗೆಲ್ಲ ಮಾಡಬಾರದು, ಭಿಕ್ಷೆ ಎಲ್ಲವನ್ನು ನೀನು ಆಶ್ರಮಕ್ಕೆ ತಂದು ಹಾಕಬೇಕು. ನೀನು ಅದನ್ನು ಉಪಯೋಗಿಸುವಂತಿಲ್ಲವೆ'ಂದ. ಶಿಷ್ಯ ಒಪ್ಪಿದ. ಭಿಕ್ಷೆ ಬೇಡಿದ್ದನ್ನು ಆಶ್ರಮಕ್ಕೆ ತಪ್ಪದೆ ಒಪ್ಪಿಸುತ್ತಿದ್ದ. ಮತ್ತೆ ಕೆಲವು ದಿನಗಳ ನಂತರ ಗುರು ಶಿಷ್ಯನನ್ನು ಕರೆದು 'ಆಹಾರಕ್ಕೆ ಈಗೇನು ಮಾಡುವೆ' ಎಂದು ಕೇಳಿದ. ಅದಕ್ಕೆ ಉಪಮನ್ಯು 'ಗುರುವೆ, ಕರುಗಳು ತಾಯಿಯ ಮೊಲೆಯಿಂದ ಹಾಲು ಕುಡಿಯುವಾಗ ಒಸರುವ ಹಾಲಿನ ನೊರೆಯನ್ನು ಸೇವಿ

**ಡಾ|| ಸರ್ಜಾ ಚಂದ್ರಶೇಖರಯ್ಯ**

ಸುತ್ತೇನೆಂದ. ಕರುವಿನ ಎಂಜಲನ್ನು ನೀನು ಕುಡಿಯಬೇಡವೆಂದು ಗುರು ಹೇಳಿದ. ಸದಾ ಹಸಿವಿನಿಂದ ನರಳುತ್ತಿದ್ದ ಉಪಮನ್ಯುವಿಗೆ ಈಗ ಕಷ್ಟಕ್ಕೆ ಬಂತು. ಹಸಿವನ್ನು ತಾಳಲಾರದೆ, ಎಕ್ಕೆಯ ಹಾಲನ್ನು ಕುಡಿದು ಕಣ್ಣು ಕಳೆದುಕೊಂಡ. ಕುರುಡನಾದ ಉಪಮನ್ಯು ತಡವರಿಸುತ್ತಾ ಹೋಗುವಾಗ ಗುಂಡಿಗೆ ಬಿದ್ದುಬಿಟ್ಟ. ಗುರು, ಉಪಮನ್ಯುವನ್ನು ಹುಡುಕುತ್ತಾ ಬಂದ. ಶಿಷ್ಯನ ಹೆಸರು ಹಿಡಿದು ಕೂಗಿದ. ಶಿಷ್ಯ ಇಲ್ಲಿ ಗುಂಡಿಯಲ್ಲಿ ಬಿದ್ದು ಬಿಟ್ಟಿದ್ದೇನೆಂದು ಹೇಳಿದ. ಶಿಷ್ಯನ ಸ್ಥಿತಿ ನೋಡಿ ಗುರುವಿಗೆ ಕನಿಕರವಾಯ್ತು. ದೇವತೆಗಳ ವೈದ್ಯರಾದ ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸಿದರು. ಅವರು ತಕ್ಷಣ ಬಂದು ಉಪಮನ್ಯುಗೆ ಕಣ್ಣು ಕೊಟ್ಟರು. ಅಶ್ವಿನೀ ದೇವತೆಗಳ ಕೃಪೆಯಿಂದ, ಉಪಮನ್ಯುವಿಗೆ ಮತ್ತೆ ಆರೋಗ್ಯ ಶಕ್ತಿಗಳು ಬಂದವು. ಮೊದಲಿಗಿಂತ ಹೆಚ್ಚು ಆರೋಗ್ಯ ತೇಜಸ್ಸುಗಳಿಂದ ಕಾಂತಿಯುತವಾದ. ಗುರು ಉಪಮನ್ಯುವನ್ನು ಕರೆದು 'ಶಿಷ್ಯ, ನೀನು ಸತ್ವಪರೀಕ್ಷೆಯಲ್ಲಿ ಉತ್ತೀರ್ಣವಾಗಿರುವೆ. ಇನ್ನು ನೀನು ಮನೆಗೆ ಹೋಗಬಹುದು. ನೀನೊಬ್ಬ ಮ ಹಾ ನ್ ಗುರುವಾಗುವೆ' ಎಂದು ಹರಿಸಿದ. ಉಪಮನ್ಯು ಗುರುವಿನ ಅನುಗ್ರಹದಿಂದ ದೊಡ್ಡ ಗುರುವಾಗಿ ಪ್ರಸಿದ್ಧಿ ಪಡೆದ.

*

## ಹರಿ ನಿನ್ನ ನೆನೆವೆ

ನಿನ್ನ ನಾಮವ ನಂಬಿ ||
ಬದುಕಿದೆನೋ ದೇವ
ನಿನ್ನ ನಾಮವ ನಂಬಿ ||
ನಿನ್ನ ಪಾದವ ನಂಬಿ
ಬಾಳುವೆನೋ ದೇವಾ ||ಪ||

ಹರನೆಂದರೂ ನೀನೇ,
ಹರಿ ಎಂದರೂ ನೀನೆ
ಸಕಲ ಜೀವಾತ್ಮದಲ್ಲಿ ||
ತುಂಬಿಹೆ ನೀನೇ
ತನು ಮನದಲ್ಲೂ
ನಿನ್ನ ನಂಬಿಹೆ ನಾನು
ಕರುಣಾಂತರಂಗ ||
ಕರುಣಿಸಿ ಕಾಯೋ ದೇವಾ || ||೧||

ಸುಖ ಬಂದಾಗ ನಾನು
ಹಿಗ್ಗುವುದಿಲ್ಲವಯ್ಯ
ದುಃಖ ಬಂದಾಗ ನಾನು
ತಗ್ಗುವುದಿಲ್ಲವಯ್ಯ
ಬಡತನ ಸಿರಿತನ ಶಾಶ್ವತವಲ್ಲವಯ್ಯ
ನಿನ್ನ ನಾಮ ಒಂದೆನಗೆ
ಶಾಶ್ವತ, ಕಾಯೋ ದೇವ || ||೨||

ಭಕ್ತಿ ಭಾವವ ತೋರಿ
ಸತ್ಯಧರ್ಮದಿ ನಡೆಸಿ
ಮುಕ್ತಿ ಮಾರ್ಗಕೆ ನನ್ನ
ಕರದೊಯ್ಯೋ ದೇವಾ
ಕಾಮ ಕ್ರೋಧವನಳಿಸಿ
ವೈರಮೋಹವನು ತೊರೆಸಿ
ನಿನ್ನ ನಾಮ ನನ್ನ ನಾಲಿಗೆಯಲಿ
ಬೆಳೆಸೋ ದೇವಾ ||೩||

**ಬಿ. ಜಿ. ಶಂಕರಪ್ಪ**

## ನಿಮಗಿದು ತಿಳಿದಿದಿಯೇ?

1. ಖ್ಯಾತ ತೆಲುಗು ವಾಗ್ಗೇಯಕಾರ ಅನ್ನಮಾಚಾರ್ಯರ ಜನ್ಮಸ್ಥಳ.
2. ತಿರುಪತಿಯ ಗೋವಿಂದರಾಜಸ್ವಾಮಿ ಆಲಯದ ರಾಜಗೋಪುರವನ್ನು ಕಟ್ಟಿಸಿದವರು.
3. ತಮಿಳು ಆಳ್ವಾರ್‌ಗಳ ಸಂಖ್ಯೆ.
4. ಕನ್ನಡದ ದಾಸಸಾಹಿತ್ಯದಲ್ಲಿ ಮೊದಲಿಗೆ ಕೀರ್ತನೆ ರಚಿಸಿದವರು.
5. ರಾಮಚರಿತ ಮಾನಸವನ್ನು ಬರೆದ ಕವಿಯ ಹೆಸರು
6. ಜಗನ್ನಾಥ ವಿಜಯವನ್ನು ಕನ್ನಡದಲ್ಲಿ ಬರೆದ ಕವಿ.
7. ಕನಕದಾಸರು ಬರೆದ ವಿಡಂಬನಕಾವ್ಯ.
8. ಗೋಗ್ರಹಣವನ್ನು ಕುರಿತು ಭಾಸ ಬರೆದ ನಾಟಕ.
9. ಅರವತ್ತಮೂರು ಪುರಾತನರ ಕಥೆಗಳನ್ನು ಕನ್ನಡದಲ್ಲಿ ರಗಳೆಯಲ್ಲಿ ತಿಳಿಸಿದ ಕವಿ.
10. ಶತ್ರುಘ್ನನ ತಾಯಿಯ ಹೆಸರು
11. ವಾನರಸೇನೆಗೆ ಲಂಕೆಯ ದಾರಿ ತೋರಿಸಿದ ಪಕ್ಷಿ
12. ಸತ್ಯಭಾಮೆಯ ತಂದೆಯ ಹೆಸರು
13. ಖಾಂಡವವನ ದಹನದಲ್ಲಿ ಅರ್ಜುನನಿಗಾದ ಲಾಭ.
14. ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿನ ಆನೆಗಳ ತಾರು.
15. ಶ್ರೀರಾಮಚಂದ್ರನ ಅನುಗ್ರಹಕ್ಕೆ ಪಾತ್ರಳಾದ ವೃದ್ಧೆ

(ಉತ್ತರಗಳಿಗಾಗಿ 38 ನೇ ಪುಟ ನೋಡಿ)

# ತತ್ ತ್ವಂ ಅಸಿ

'ತತ್ ತ್ವಂ ಅಸಿ' ಅಂದರೇ ಯಾವುದು ಎಲ್ಲದರ ಸಾರವೋ (ಮೂಲವೋ) ಅದು ತನ್ನ ಆತ್ಮವನ್ನೂ ಹೊಂದಿದೆ. ಅದೇ ಆತ್ಮವು. ಅದೇ ಸತ್ಯವು ತತ್-ಅದು ತ್ವಂ-ನೀನೇ, ಅಸಿ ನೀನೇ ಆಗಿರುವೆ. ತಾತ್ಪರ್ಯ ಆ ಸದ್ ವಸ್ತುವೇ ನೀನಾಗಿರುವೆ.

'ತತ್ತ್ವಂಅಸಿ' ಎಂಬುದರ ಅರ್ಥವನ್ನು ಇನ್ನೂ ವಿಶದೀಕರಿಸಲು ಛಾಂದೋಗ್ಯ ಉಪನಿಷತ್‌ನಲ್ಲಿ ಬರುವ 'ಉದ್ದಾಲಕ-ಶ್ವೇತ ಕೇತು' ಅವರ ಸಂವಾದವನ್ನು ಅವಲೋಕಿಸೋಣ.

ಉದ್ದಾಲಕ:- ಶ್ವೇತಕೇತು! ಯಾವುದರಿಂದ ನಾವು ಕಿವಿಯಿಂದ ಕೇಳಲಾರದುದನ್ನು ಕೇಳುವೆವೋ, ಕಣ್ಣಿನಿಂದ ದರ್ಶಿಸಲಾರದನ್ನು ಕಾಣುವೆವೋ, ಅರಿವಿಗೆ ನಿಲುಕದ್ದನ್ನು ಅರಿಯುವೆವೋ, ಆ ವಿದ್ಯೆ ಯಾವುದು ಗೊತ್ತೇ ನಿನಗೆ?

ಶ್ವೇತಕೇತು:- ಸ್ವಾಮಿನ್, ತಾವೇ ಆ ವಿದ್ಯೆಯನ್ನು ತಿಳಿಸಿದರೆ..........ನನಗೆ ತುಂಬಾ ಉಪಕಾರವಾಗುವುದು.

ಉದ್ದಾಲಕ:- ಹಾಗೇ ಆಗಲಿ ಕೇಳು, ವತ್ಸಾ ನಿನಗೆ ಜೇಡಿ ಮಣ್ಣು ಪರಿಚಯ ಉಂಟು ಅಷ್ಟೆ. ಅದರಿಂದ ಕುಡಿಕೆ-ಮಡಿಕೆ-ತಟ್ಟೆ-ಮುಚ್ಚಳಗಳನ್ನು ಮಾಡುತ್ತಾರೆ. ಆದರೆ ಈ ಬದಲಾವಣೆ-ಶಬ್ದಗಳ ಆಧಾರದಿಂದ ಹೆಸರುಗಳು ಆಗಿರುತ್ತೆ. ವಸ್ತುತಃ ಎಲ್ಲ ಮಣ್ಣೇ ಆಗಿದೆಯಷ್ಟೆ. ಅಂತೆಯೇ ಆ ವಿದ್ಯೆಯು.

ಶ್ವೇತಕೇತು:- ಸ್ವಾಮಿನ್! ನನಗೆ ಇನ್ನಷ್ಟು ವಿಶದವಾಗಿ ತಿಳಿಸಿರಿ.

ಉದ್ದಾಲಕ:- ಆಗಲಿ ಸೌಮ್ಯ! ನೋಡು ಮಗು, ನ್ಯಗ್ರೋಧ (ಆಲದಮರದ) ಮರದ ಹಣ್ಣೊಂದನ್ನು ತೆಗೆದು ಕೊಂಡು ಬಾ......

ಶ್ವೇತಕೇತು:- ಗುರುಗಳೇ! ಇದೋ ತಂದಿರುವೆ.

ಉದ್ದಾಲಕ:- ಅದನ್ನು ಒಡೆದು, ಅದರಲ್ಲೇನು ಕಾಣುತ್ತಿರುವುದು ಹೇಳು?

ಶ್ವೇತಕೇತು:- ಅತ್ಯಂತ ಸಣ್ಣದಾದ ಬೀಜಗಳು ಸ್ವಾಮಿನ್!

ಉದ್ದಾಲಕ:- ಓ ಸೌಮ್ಯ! ಆ ಬೀಜಗಳಲ್ಲೊಂದನ್ನು ಒಡೆದು, ಅದರಲ್ಲಿ ಏನಿದೆ ನೋಡು......

ಶ್ವೇತಕೇತು:- ಏನೂ ಕಾಣುವುದೇ ಇಲ್ಲ, ಗುರುಗಳೇ!



ಉದ್ದಾಲಕ:- ವತ್ಸಾ! ಅಲ್ಲಿ ನಿನ್ನ ಕಣ್ಣಿಗೆ ಕಾಣಿಸದಿರುವ ಸೂಕ್ಷ್ಮ ಸಾರವಿದೆಯಲ್ಲ- ಆ ಸಾರದಿಂದಲೇ ಈ ಮಹತ್ತಾದ ನ್ಯಗ್ರೋಧ ವೃಕ್ಷ ಉಂಟಾಗುವುದು. ಅದೇ ಮೂಲವಾದ ಆತ್ಮಶಕ್ತಿಯನ್ನು ಹೊಂದಿದೆ. ಅದೇ ಸತ್ಯವು. ಅದೇ ತತ್-ತ್ವಂ-ಅಸಿ ಆಗಿದೆ. ಶ್ವೇತಕೇತು ತಿಳಿಮಗು...

ಶ್ವೇತಕೇತು:- ಗುರುಗಳೇ! ಮತ್ತಷ್ಟು ವಿಶದವಾಗಿ ವಿವರಿಸಿ......

ಉದ್ದಾಲಕ:- ಹಾಗೇ ಆಗಲಿ ವತ್ಸ! ಗಮನವಿಟ್ಟು ಕೇಳು. ತೆಗೆದುಕೊ ಈ ಹಿಡಿ ಉಪ್ಪನ್ನು ಒಂದು ಪಾತ್ರೆ ನೀರಿನೊಳಕ್ಕೆ ಹಾಕಿ, ಮತ್ತೆನಾಳೆ ಬೆಳಗ್ಗೆ ನನ್ನ ಬಳಿ ಬಾ.

ಶ್ವೇತಕೇತು:- (ಮರುದಿನ ಬೆಳಗ್ಗೆ-ಗುರುಗಳು ಹೇಳಿದಂತೆ ಮಾಡಿ-ಬಂದಾಗ)

ಶ್ವೇತಕೇತು:- ಆಚಾರ್ಯರೇ! ಇಗೋ ಉಪ್ಪು ಕರಗಿದ ಪಾತ್ರೆಯನ್ನು ಹಿಡಿದು ತಂದಿದ್ದೇನೆ.

ಉದ್ದಾಲಕ:- ಈ ವತ್ಸಾ ಪಾತ್ರೆಯ ನೀರಿನಲ್ಲಿ. ಆ ಹಿಡಿಉಪ್ಪನ್ನು ತೆಗೆದು ಕೊಡು.

ಶ್ವೇತಕೇತು:- ಗುರುಗಳೇ! ಎಲ್ಲಾ ಕರಗಿ ಹೋಗಿದೆಯಲ್ಲಾ..........

ಉದ್ದಾಲಕ:- ಸರಿ.........ಆ ಪಾತ್ರೆಯ ನೀರನ್ನು......ಮೇಲಿನಿಂದ-ಮಧ್ಯದಿಂದ - ಕೆಳಭಾಗದಿಂದ ರುಚಿ ನೋಡ- ಹೇಳು ಹೇಗಿದೆ?

ಶ್ವೇಶಕೇತು:- ಸ್ವಾಮಿನ್! ಮೇಲಿನ-ಮಧ್ಯದ -ಕೆಳಗಿನ-ನೀರು-ಉಪ್ಪೇ ಆಗಿದೆ......

ಉದ್ದಾಲಕ:- ವತ್ಸಾ! ಈಗ ಪಾತ್ರೆಯಲ್ಲಿ ಉಪ್ಪು ಇದೆ ಅಲ್ಲವೇ!

ಶ್ವೇತತೇತು:- ಹೌದು ಇದೇ! ಗುರುಗಳೇ!

ಉದ್ದಾಲಕ:- ಹಾಗೇಯೇ! ಸೌಮ್ಯ!... ಈ ದೇಹ ದೃಷ್ಟಿಯಲ್ಲಿ ಸತ್ಯವನ್ನು ಕಾಣಲಾರೆ... ಸದ್ ವಸ್ತುವನ್ನು ಕಾಣಲಾರೆ... ಆದರೂ... ಆ ಆತ್ಮವಸ್ತು ಇದೆ... ಅದೇ ಎಲ್ಲಕ್ಕೂ ಸಾರವಸ್ತು. ತತ್ ತ್ವಂ ಅಸಿ. ಅದೇ ಸದ್ ವಸ್ತುವೇ ನೀನಾಗಿರುವೆ.

ಶ್ವೇತಕೇತು:- ಅರಿವಿನ ಅರಣೋದಯವಾಯಿತು. ಸ್ವಾಮಿನ್ ಕೃತಾರ್ಥನಾದೆ.

★

"ಮತ್ತೀಕೆರೆ ಅನಂತು"

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8–00 | ಪ್ರಾ 8–30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ಮ 1–00 | ಸಂ 6–00 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | ,, | 40–00 |
| 3. | ಪುಳಿಯೋಗರೆ | ,, | 50–00 |
| 4. | ಪೊಂಗಲು | ,, | 55–00 |
| 5. | ಸಕ್ಕರೆಪೊಂಗಲ್ | ,, | 65–00 |
| 6. | ಶಾಕರ ಭಾತ್ | ,, | 85–00 |
| 7. | ಕೇಸರೀ ಭಾತ್ | ,, | 90–00 |
| 8. | ಸೀರ | ,, | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

(9ನೇ ಪುಟದಿಂದ)

## ಉಡುಪಿ ಒಂದು ಧಾರ್ಮಿಕ ಕೇಂದ್ರ :

ಶ್ರೀ ಮನ್ ಮಧ್ವಾಚಾರ್ಯರು ಸ್ಥಾಪಿಸಿದ ದ್ವೈತ ಸಿದ್ಧಾಂತದ ಕೇಂದ್ರವೇ ಉಡುಪಿ. ಮಧ್ವಾಚಾರ್ಯರು ಉಡುಪಿಯಿಂದ ಆರು ಮೈಲಿ ದೂರದಲ್ಲಿರುವ ಪಾಜಕ ಕ್ಷೇತ್ರದಲ್ಲಿ ಜನಿಸಿದರು. ವೇದಾಂತ ಮುಂತಾದ ವಿಷಯುಗಳಲ್ಲಿ ಅಪಾರ ಜ್ಞಾನ ಸಂಪಾದಿಸಿಕೊಂಡು ದೇಶ ಪರ್ಯಟನ ಕೈಕೊಂಡರು. ಒಮ್ಮೆ ಆಚಾರ್ಯರು ಮಲ್ಪೆಯ ಸಮುದ್ರದಲ್ಲಿ ಸ್ನಾನ ಮಾಡಲು ಹೋಗಿದ್ದಾಗ, ದ್ವಾರಕೆಯ ಹಡಗೊಂದು ಬಿರುಗಾಳಿಯಿಂದಾಗಿ ನೀರಿನಲ್ಲಿ ಮುಳುಗುವುದರಲ್ಲಿತ್ತು. ಅದನ್ನು ಕಂಡ ಆಚಾರ್ಯರು ತಮ್ಮ ತಪಃಶಕ್ತಿಯಿಂದ ಅದನ್ನು ಪಾರು ಮಾಡಿದರು. ಹಡಗಿನ ಮಾಲೀಕನು, ತನ್ನ ಕೃತಜ್ಞತೆಯನ್ನು ಅರ್ಪಿಸಿ ಆಚಾರ್ಯರಿಗೆ ಎರಡು ಗೋಪೀಚಂದನದ ದೊಡ್ಡ ದೊಡ್ಡ ಗಟ್ಟಿಗಳನ್ನು ಅರ್ಪಿಸಿದನು. ಗೋಪೀಚಂದನದ ಒಂದು ಗಟ್ಟಿ ಒಡೆದಾಗ, ಅದರಲ್ಲಿ ಬಲರಾಮನ ಕಲ್ಲಿನ ಮೂರ್ತಿ ಇದ್ದುದು ಕಂಡು ಬಂತು. ಆ ಮೂರ್ತಿಯನ್ನು ಅಲ್ಲಿಯೇ ಪ್ರತಿಷ್ಠಾಪಿಸಲಾಗಿದೆ. ಅದು 'ಒಡಭಾಂಡೇಶ್ವರ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಆಚಾರ್ಯರು ಇನ್ನೊಂದು ಗಟ್ಟಿಯನ್ನು ಉಡುಪಿಗೆ ತಂದು ಮಧ್ವ ಸರೋವರದಲ್ಲಿ ತೊಳೆದರು. ಆಗ ಶ್ರೀ ಕೃಷ್ಣನ ಅತ್ಯಂತ ಸುಂದರ ಮೂರ್ತಿಯನ್ನು ಆಚಾರ್ಯರು ಕಂಡರು. ಈ ಸುಂದರ ಮೂರ್ತಿಯು ಒಂದು ಕೈಯಲ್ಲಿ ಕಡೆಗೋಲು ಇನ್ನೊಂದು ಕೈಯಲ್ಲಿ ಹಗ್ಗವಿದೆ. ಆಚಾರ್ಯರು ಈ ಮೂರ್ತಿಯನ್ನು ಉಡುಪಿಯಲ್ಲಿ ಪ್ರತಿಷ್ಠಾಪಿಸಿದರು. ಆಗ ಅವರು ಹತ್ತಿಸಿದ ಜ್ಯೋತಿ ಇಂದಿಗೂ ಬೆಳಗುತ್ತಿದೆ.

ಶ್ರೀ ಮಧ್ವಾಚಾರ್ಯರು ಎರಡು ದಶಕಗಳ ಕಾಲ ಶ್ರೀ ಕೃಷ್ಣನನ್ನು ಏಕಾಗ್ರಚಿತ್ತದಿಂದ ಪೂಜಿಸಿ ತಮ್ಮ ತರುವಾಯುವೂ ಶ್ರೀ ಕೃಷ್ಣನ ಪೂಜೆ ನಿರಂತರವಾಗಿ ನಡೆದುಕೊಂಡು ಹೋಗಲು ಅನುಕೂಲವಾಗುವಂತೆ ಎಂಟು ಜನ ಯತಿಗಳನ್ನು ನೇಮಿಸಿದರು. ಹೀಗೆ ಈ ಎಂಟು ಮಠಗಳ ಸ್ಥಾಪನೆಯಾಯಿತು. ಪಲಿಮಾರು-ಅದಮಾರು, ಕೃಷ್ಣಾಪುರ–ಪುತ್ತಿಗೆ, ಶಿರೂರು–ಸೋದೆ, ಕಾಣಿಯೂರು–ಪೇಜಾವರ– ಇವೇ ಆ ಎಂಟು ಮಠಗಳು.

ಹಿಂದುಳಿದ ಜನಾಂಗದವರಾದ ಕನಕದಾಸರು ಶ್ರೀ ಕೃಷ್ಣನ ಪರಮ ಭಕ್ತರು. ಇವರು ವಾದಿರಾಜರ ಸಮಕಾಲೀನರು ಇವರ ಭಕ್ತಿಗೆ ಮೆಚ್ಚಿ, ಪೂರ್ವಾಭಿಮುಖವಾಗಿದ್ದ ಶ್ರೀ ಕೃಷ್ಣ ಮೂರ್ತಿ ಪಶ್ಚಿಮಾಭಿಮುಖವಾಗಿ ತಿರುಗಿ, ಅಡ್ಡವಾದ ಗೋಡೆಯನ್ನು ಒಡೆದು ಭಕ್ತ ಕನಕರಿಗೆ ದರ್ಶನ ಕೊಟ್ಟಿದ್ದಾನೆ. ಈಗಲೂ ಅದಕ್ಕೆ ಕನಕನ ಕಿಂಡಿ ಎಂಬ ಹೆಸರಿದೆ. ಈ ಕಿಂಡಿಯ ಮೂಲಕವೇ ಶ್ರೀ ಕೃಷ್ಣನ ದರ್ಶನವಾಗುತ್ತಿದೆ.

ಕ್ರಿ. ಶ. 1270–80 ಸುಮಾರಿಗೆ ಶ್ರೀ ಮಧ್ವಾಚಾರ್ಯರು, ಇಲ್ಲಿ ಶ್ರೀ ಕೃಷ್ಣನ ಮಠವನ್ನು ಸ್ಥಾಪಿಸಿದಾರಭ್ಯ ಪ್ರಖ್ಯಾತವಾಗಿರುವ ಉಡುಪಿಯ ಹೆಸರು ಮೊದಲ ಬಾರಿಗೆ 1366ರ ಶಾಸನದಲ್ಲಿ ಕಂಡು ಬಂದಿದ್ದರೂ ಈ ಸ್ಥಳವು ಇನ್ನೂ ಪುರಾತನವಾದದ್ದೆಂಬುದರಲ್ಲಿ ಸಂದೇಹವಿಲ್ಲ. ಇಲ್ಲಿರುವ ಅನಂತೇಶ್ವರ, ಚಂದ್ರಮೌಳೇಶ್ವರ ದೇವಾಲಯಗಳು ಜೈನ ಬಸದಿಗಳಾಗಿದ್ದುವೆಂದು ವಿದ್ವಾಂಸರು ಊಹಿಸುತ್ತಾರೆ. ಇವುಗಳ ವಾಸ್ತುಶಿಲ್ಪವು 7, 8ನೇ ಶತಮಾನಗಳಿಗೆ ಸೇರಿದ್ದೆಂಬ ಅಭಿಪ್ರಾಯವಿದೆ. ಸಾರಸ್ವತ ಬ್ರಾಹ್ಮಣರು ಕೃಷ್ಣ ಮಠಕ್ಕೆ ಭೂಮಿ ದತ್ತಿ ಬಿಟ್ಟ ಉಲ್ಲೇಖ 1366ರ ಕೆಲವು ಶಾಸನಗಳಲ್ಲಿವೆ.

ಉಡುಪಿಯಲ್ಲಿ ನಡೆಯುವ ಶ್ರೀ ಕೃಷ್ಣ ಜಯಂತಿ, ಲಕ್ಷದೀಪೋತ್ಸವ ಮುಂತಾದ ಉತ್ಸವಗಳ ಕಾಲದಲ್ಲಿ ಸಾವಿರಾರು ಭಕ್ತರು ಸೇರುತ್ತಾರೆ. ದಕ್ಷಿಣ ಭಾರತದ ಅಪೂರ್ವವಾದ ಉತ್ಸವಗಳಲ್ಲಿ ಇವೂ ಸೇರುತ್ತವೆ.

* * *

# ಆಂಡಾಳ್ - ಶ್ರೀರಂಗನಾಥ

ತೂಮಣಿ ಮಾಡುತ್ತು ಚುಟ್ರುಮ್
ವಿಳಕ್ಕೆರಿಯ
ದೂಪಮ್ ಕಮಳ್ ತ್ತುಯಿಲಣ್ಣೈ
ಮೇಲ್ ಕಣ್ವಳರುಮ್
ಮಾಮಾನ್ ಮಗಳೇ ಮಣಿಕ್ಕದವಂ
ತಾಳ್ ತೆರುವಾಯ್
ಮಾಮಿರ್ ಅವಳ್ಳೆ ಎಳುಪ್ಪೀರೋ,
ಉನ್ ಮಗಳ್ ತಾನ್
ಊಮೆಯೋ ಅನ್ರಿ ಚ್ಚೆವುಡೋ
ಅನನ್ದಲೋ
ಏಮಪ್ಪೆರುನ್ದುಯಿಲ್ ಮನ್ದಿರಪ್ಪ
ಟ್ಟಾಳೋ
ಮಾಮಾಯನ್ ಮಾದವನ್ ವೈಗುನ್ದ
ನೆನ್ನೆನ್ರು
ನಾಮಮ್ ಪಲವುಮ್ ನವಿನ್ರೇಲೋ
ರೆಮ್ಬಾವಾಯ್

ಎಂತಹ ಸುಂದರವಾದ ವರ್ಣನೆ. ಒಳಗೆ ಮಾನವ ಮಗಳು ನಿದ್ರಿಸುತ್ತಿದ್ದಾಳೆ. ಆ ಗೃಹವಾದರೋ ಪರಿಶುದ್ಧವಾದ ಮಾಣಿಕ್ಯದಿಂದ ಕಟ್ಟಲ್ಪಟ್ಟಿದೆ. ಸುತ್ತಲೂ ದೀಪಗಳು ಉರಿಯುತ್ತಿವೆ. ಅಗರು, ಹಾಲುಮಡ್ಡಿ ಮುಂತಾದ ಧೂಪ ಘಮಘಮಿಸುತ್ತಿದೆ. ಅವಳು ಹಂಸತೂಲಿಕಾತಲ್ಪದಲ್ಲಿ ಮಲಗಿ ನಿದ್ರಿಸುತ್ತಿದ್ದಾಳೆ. ಹೊರಗಿನಿಂದ ಬಾಲೆಯರು ಅವಳನ್ನು ಎಬ್ಬಿಸುತ್ತಿದ್ದಾರೆ. "ಏಳು, ಮಾವನ ಮಗಳೇ. ಚಿಲಕವನ್ನು ತೆಗೆಯುವವಳಾಗು." ಉಹುಂ, ಶ್ರೀಕೃಷ್ಣಾನುಭಾವದ ರಸದಲ್ಲಿ ತಲ್ಲಿನಳಾಗಿರುವ ಅವಳು ಏಳುವುದಿಲ್ಲ. ಆಗ ಬಾಲೆಯರು ಅವಳ ತಾಯಿಗೆ ಹೇಳುತ್ತಾರೆ. 'ಅತ್ತೆಯವರೇ. ನೀವಾದರೂ ಅವಳನ್ನು ಎಬ್ಬಿಸಿ. ಅವಳೇನು ಮೂಕಿಯೋ, ಕಿವುಡಿಯೋ ಅಥವಾ ಸೋಮಾರಿಯೋ ಕೇಳಿ. ಯಾರಾದರೂ ಇವಳಿಗೆ ಮಂಕುಬೂದಿ ಚೆಲ್ಲಿದ್ದಾರೇನು? ಮಂತ್ರಮುಗ್ಧಳನ್ನಾಗಿ ಮಾಡಿದ್ದಾರೇನು? ಅಥವಾ ಇವಳ ನೆರಮನೆಯಲ್ಲೇ ಶ್ರೀಕೃಷ್ಣನಿರುವುದರಿಂದ ರಾತ್ರಿಯೆಲ್ಲಾ, ಅವನು ಇವಳೊಡನಿದ್ದು ಈಗ ತಾನೇ ಎದ್ದು ಹೋಗಿರಬಹುದಾದ್ದರಿಂದ ಈಕೆ ಇನ್ನೂ ಅದೇ ತನ್ಮಯತೆಯಲ್ಲಿದ್ದಾಳೋ? ನಾವು ವ್ರತಾನುಷ್ಠಾನಕ್ಕಾಗಿ ಹೋಗುತ್ತಿರುವಾಗ ಇವಳೊಬ್ಬಳು ಬಾರದಿದ್ದರೆ ನಮಗೆ ಕಷ್ಟವಾಗುತ್ತದೆ. ಆದ್ದರಿಂದ ಜಾಗ್ರತೆ ಎಬ್ಬಿಸಿ.' ಅದಕ್ಕೆ ಅವಳ ತಾಯಿ ಉತ್ತರ ಕೊಡುತ್ತಾಳೆ 'ಮಕ್ಕಳಿರಾ, ನೀವು ಇವಳ ಮುಂದೆ ಶ್ರೀಕೃಷ್ಣನ ನಾಮ ಸಂಕೀರ್ತನೆಮಾಡಿ. ಆಗ ಇವಳು ಏಳುತ್ತಾಳೆ'. ಅದಕ್ಕೆ ಆ ಬಾಲಿಕೆಯರು "ಇದುವರೆಗೂ ನಾವು ಅವನ ಸಹಸ್ರ ನಾಮಗಳನ್ನು ಹಾಡಿದ್ದೇವೆ. ಇನ್ನು ಎಬ್ಬಿಸಿ'' ಎನ್ನುತ್ತಾರೆ.

ಶ್ರೀಮತಿ ರುಕ್ಮಿಣಿಗಿರಿಮಾಜಿ, ಎಂ.ಎ.

ಗೋಪೀಗೀತದ ಛಾಯೆಯಂತಿರುವ ಈ ಗೀತೆ ಶ್ರೀ ಗೋದಾದೇವಿಯ 'ತಿರುಪ್ಪಾವೈ' ಎಂಬ ಪ್ರಬಂಧದ ಒಂಬತ್ತನೆಯ ಪಾಶುರ ಅಥವಾ ಗೀತೆಯಾಗಿದೆ.

ಭಕ್ತಾಗ್ರೇಸರಳೂ, ಭಕ್ತಿ ಜ್ಞಾನಗಳಲ್ಲಿ ಮಿಗಿಲಾದವಳೂ ಆದ ಶ್ರೀ ಗೋದಾದೇವಿ ಹರಿದಾಸರೆಗೆಲ್ಲರಿಗಿಂತ ಕಿರಿಯ ವಯಸ್ಸಿನಲ್ಲಿಯೇ ಅಂದರೆ ತನ್ನ ಐದನೆಯ ವಯಸ್ಸಿನಲ್ಲೇ ಈ ಪ್ರಬಂಧವನ್ನು ರಚಿಸಿದ್ದಾಳೆ. ತಮಿಳಿನ ನಾಲ್ಕುಸಾವಿರ ಪ್ರಬಂಧಗಳಲ್ಲಿ ಇವಳ 'ತಿರುಪ್ಪಾವೈ' ಹಾಗೂ 'ನಾಯಕೀ ಗೀತವೂ' ಸೇರಿ ಶ್ರೀವೈಷ್ಣವರಿಂದ ನಿತ್ಯಾನುಸಂಧಾನಗಳಾಗಿವೆ. ಸ್ವಯಂ ಶ್ರೀರಾಮಾನುಜಾಚಾರ್ಯರು ಇವಳ ಗೀತೆಗಳನ್ನು ಹಾಡುತ್ತಾ ತನ್ಮಯರಾಗಿ ಹೋಗುತ್ತಿದ್ದರೆಂದು ತಿಳಿಯಬಂದಿದೆ.



ಶ್ರೀವಿಲ್ಲಿಪುತ್ತೂರಿನಲ್ಲಿ ವಿಷ್ಣುಚಿತ್ತರೆಂಬ ಭಾಗವತೋತ್ತಮರು ವಟಪತ್ರಶಾಯಿಯಾದ ಶ್ರೀಕೃಷ್ಣನ ಕೈಂಕರ್ಯಕ್ಕಾಗಿ ತುಲಸೀತೋಟವೊಂದನ್ನು ಬೆಳೆಸಿಕೊಂ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
**ತಿ. ತಿ. ದೇವಸ್ಥಾನ, ತಿರುಪತಿ–517507**
**ಚಿತ್ತೂರು ಜಿಲ್ಲೆ, ಆಂ. ಪ್ರ.**

ಡಿದ್ದು ಅದರಲ್ಲಿ ಹಲವು ಜಾತಿಯ ಪುಷ್ಪಗಳ ಗಿಡಗಳನ್ನು ನೆಟ್ಟು ಪೋಷಿಸುತ್ತಿದ್ದರು. ಒಂದುದಿನ ತುಳಸೀಗಿಡವೊಂದರ ಬುಡದಲ್ಲಿ ಪೆಟ್ಟಿಗೆಯೊಂದು ಕಾಣಬಂದಿತು. ವಿಷ್ಣುಚಿತ್ತರಿಗೆ ಸುಂದರವಾದ ಹೆಣ್ಣು ಕೂಸು ಅದರಲ್ಲಿ ಕಂಡಿತು. ವಿಷ್ಣುಚಿತ್ತರು ಅದನ್ನೆತ್ತಿಕೊಂಡು ಅದಕ್ಕೆ "ಕೋದೈ'' ಎಂದು ನಾಮಕರಣ ಮಾಡಿದರು. ತಮಿಳಿನಲ್ಲಿ 'ಕೋದೈ' ಎಂದರ ಸುಂದರವಾದ ಮುಂಗುರುಳುಗಳಿರುವವಳೆಂದು ಅರ್ಥವಾಗುತ್ತದೆ. ಇದರ ಸಂಸ್ಕೃತದ ರೂಪವೇ ಗೋದಾ. ಇವಳು ಗೋಚರಿಸಿದ ಕಾಲ ಕಲಿಯುಗದ ೯೮ ನೇ ನಳವರ್ಷ ಅಂದರೆ ಕ್ರಿ. ಪೂ. 3005ನೇ ಕರ್ಕಾಟಕಮಾಸ ಫಲ್ಗುನೀ ನಕ್ಷತ್ರವೆಂದು 'ಸೂರಿಚರಿತಂ', 'ಗುರುಪರಂಪರಾ', ಮತ್ತು 'ಪ್ರಪನ್ನಾಮೃತಂ' ಎಂಬ ಗ್ರಂಥಗಳಲ್ಲಿ ಹೇಳಿದೆ.

ಲಕ್ಷ್ಮ್ಯಂಶಸಂಭೂತಳಾದ ಈ ಬಾಲಿಕೆಯು ದಿನದಿನಕ್ಕೆ ಪೂರ್ಣಚಂದ್ರನಂತೆ ಅಭಿವೃದ್ಧಿಗೊಳ್ಳುತ್ತಾ ತನ್ನ ಅನಾದೃಶವಾದ ಸೌಂದರ್ಯದಿಂದಲೂ, ಮನಮೋಹಕವಾದ ಆಟಪಾಟಗಳಿಂದಲೂ, ಪೋಷಕ ಪಿತೃವಿನ ಮನಸ್ಸನ್ನೂ, ಪರಿವಾರದವರನ್ನೂ, ಮುಗ್ಧಗೊಳಿಸುತ್ತಿದ್ದಳು.

ಇವಳ ಆಟಪಾಟಗಳೆಲ್ಲಾ ಶ್ರೀಕೃಷ್ಣನ ವಿಷಯಕವಾಗಿಯೇ ಇದ್ದುದರಿಂದ ಜ್ಞಾನಿಗಳಾದ ವಿಷ್ಣುಚಿತ್ತರಿಗೆ ಇವಳು ಸಾಕ್ಷಾತ್ ಲಕ್ಷ್ಮಿಯ ಅಂಶವೇ ಎಂಬುದು ಸ್ಥಿರಪಟ್ಟಿತು.

ಐದು ವರ್ಷಗಳ ಬಾಲ್ಯಾವಸ್ಥೆಯಲ್ಲಿಯೇ ಇವಳಿಗೆ ಸಕಲ ವೇದಾರ್ಥಸಾರಗಳೂ ತಿಳಿದಿದ್ದುವು. ಶ್ರೀಕೃಷ್ಣವಿರಹದಿಂದ ಇವಳು ತಪ್ತಳಾಗಿರುತ್ತಿದ್ದಳು. ಹೀಗಿರುವಲ್ಲಿ ಒಮ್ಮೆ ಪರಮಭಾಗವತಶಿಖಾಮಣಿಗಳಾದ ಕೆಲವರು ಈಕೆಯನ್ನು ಕಂಡು ಶ್ರೀಕೃಷ್ಣಸಮಾಗಮವಾಗಬೇಕಾದರೆ ಗೋಪೀಭಾವವನ್ನು ಅನುಕರಿಸಬೇಕೆಂದು ಹೇಳಿದರು. ಒಡನೆ ಅವಳು ತನ್ನಲ್ಲಿ ಗೋಪೀಭಾವವನ್ನು ಆವಾಹನೆ ಮಾಡಿಕೊಂಡಳು. ಅವಳ ನಡೆ, ನುಡಿ, ಮುಡಿ ಎಲ್ಲಾ ಗೋಪಿಯರಂತೆ ಮಾರ್ಪಟ್ಟವು. ಆಗ ಭಾಗವತದಲ್ಲಿ ವರ್ಣಿತವಾಗಿರುವ ಕಾತ್ಯಾಯನೀ ವ್ರತವನ್ನು ತಾನು ಆಚರಿಸ ತೊಡಗಿದಳು. ನಂದಗೋಕುಲದಲ್ಲಿ ಶ್ರೀಕೃಷ್ಣನು ಪ್ರಾಪ್ತವಯಸ್ಕರಾದ ಹೆಣ್ಣುಮಕ್ಕಳೊಂದಿಗೆ ನಡೆಸುತ್ತಿದ್ದ ವ್ಯವಹಾರದಿಂದ ಶಂಕೆಗೊಂಡು ಹಿರಿಯರು ತಂತಮ್ಮ ಹೆಣ್ಣುಮಕ್ಕಳನ್ನು ನೆಲಮಾಳಿಗೆಗಳಲ್ಲಿ ಬಂಧಿಸಿಟ್ಟಿದ್ದರು. ಅಲ್ಲದೆ ಶ್ರೀಕೃಷ್ಣನು ಅವರ ಕಣ್ಣಿಗೆ ಬೀಳದಂತೆ ಕಟ್ಟಾಜ್ಞೆಯನ್ನು ಮಾಡಿದ್ದರು. ಆಗ ಗೋಕುಲದಲ್ಲಿ ಸರಿಯಾದ ಕಾಲದಲ್ಲಿ ಮಳೆಯಾಗದೆ ಪೈರು ಪಚ್ಚೆಗಳು ಒಣಗಿ ಗೋವುಗಳಿಗೆ ಮೇವಿಲ್ಲದೆ ಹೋಯಿತು. ಗೋವಳರೆಲ್ಲರೂ ಕಂಗೆಟ್ಟು ಒಟ್ಟಿಗೆ ಕಲೆತು 'ಹೀಗೆಯೇ ಆದರೆ ನಮಗಾಗಲೀ ಗೋವುಗಳಿಗಾಗಲೀ ಉಳಿಗಾಲವಿಲ್ಲ. ಆದ್ದರಿಂದ ನಮ್ಮ ಊರಿನ ಹೆಣ್ಣುಮಕ್ಕಳನ್ನೆಲ್ಲಾ ಸೇರಿಸಿ ಒಂದು ವ್ರತವನ್ನಾಚರಿಸೋಣ ಅದಕ್ಕೆ ಶ್ರೀಕೃಷ್ಣನೇ ನಾಯಕನಾಗಿರಲಿ' ಎಂದು ತೀರ್ಮಾನಿಸಿ ಅದರಂತೆ ಶ್ರೀಕೃಷ್ಣನನ್ನು ಸಮಾಧಾನ ವಚನಗಳಿಂದ ಒತ್ತಾಯಪಡಿಸಿ ಗೋಪಬಾಲಿಕೆಯರನ್ನು ಶ್ರೀಕೃಷ್ಣನ ವಶಕ್ಕೆ ಒಪ್ಪಿಸಿದರು. ಕೃಷ್ಣನೂ ಗೋಪಬಾಲೆಯರೂ ಮತ್ತೆ ಕಲೆತುದಕ್ಕಾಗಿ ಸಂತೋಷಗೊಳ್ಳುತ್ತಿರಲು ರಾತ್ರಿಯಾಗಿ ಹೋಯಿತು. ಪುನಃ ಹಿರಿಯರ ಅಸಮಾಧಾನಕ್ಕೆ ಒಳಗಾಗಬಾರದೆಂದು ಅವರೆಲ್ಲಾ ತಂತಮ್ಮ ಮನೆಗಳಿಗೆ ಹೋದರು. ಶ್ರೀಕೃಷ್ಣನು ನಪ್ಪಿನ್ನೈಪಿರಾಟ್ಟಿಯ ಮನೆ ಹೊಕ್ಕನು. ಮಾರನೆಯ ಬೆಳಿಗ್ಗೆ ಉಷಃಕಾಲದಲ್ಲಿಯೇ ಎದ್ದು ವ್ರತಾಚರಣೆಗೆ ಮೊದಲು ಎಲ್ಲರೂ ಸ್ನಾನಮಾಡೋಣ ಎಂದು ನಿರ್ಧರಿಸಿದರು.

ಹೀಗೆ ಮನೆ ಸೇರಿದ ಗೋಪಿಯರು ಬಹುಕಾಲದ ನಂತರ ಆಗತಾನೇ ಶ್ರೀ ಕೃಷ್ಣನೊಂದಿಗೆ ಸೇರಿ ಮತ್ತೆ ಅಗಲಿದ ಪ್ರಯುಕ್ತ ವಿರಹತಪ್ತರಾಗಿ ರಾತ್ರಿಯಾದ ಕೂಡಲೇ ತಮ್ಮ ಮನೆಗಳಿಂದ ಹೊರಟು ತಮ್ಮಂತೆಯೇ ಶ್ರೀ ಕೃಷ್ಣ ಗುಣಗಳನ್ನು ಚಿಂತಿಸುತ್ತ ಮಲಗಿದ್ದ ಎಲ್ಲ ಗೋಪಿಯರ ಮನೆಗಳಿಗೂ ಹೋಗಿ ಒಬ್ಬಳನ್ನೂ ಬಿಡದೆ ಎಲ್ಲರನ್ನೂ ಜೊತೆಯಲ್ಲಿ ಕರೆದುಕೊಂಡು ನಂದಗೋಪನ ಮನೆಯನ್ನು ಸೇರಿ ಅಲ್ಲಿ

ಮಲಗಿದ್ದ ಕೃಷ್ಣನನ್ನು ಎಬ್ಬಿಸಿ, ತಮ್ಮ ಕೋರಿಕೆಯನ್ನು ಮನಮುಟ್ಟುವಂತೆ ಅವನಿಗೆ ನಿವೇದಿಸಿ ಅವನಿಂದ ಅನುಗ್ರಹೀತರಾಗುವುದೇ ಕಾತ್ಯಾಯನೀವ್ರತ.

ಆಂಡಾಳ್ ಈ ವ್ರತಾಚರಣೆಗಾಗಿ ನಂದಗೋಕುಲಕ್ಕೆ ಹೋಗಲಿಲ್ಲ. ತಾನಿರುವ ಶ್ರೀವಿಲ್ಲಿಪುತ್ತೂರನ್ನೇ ನಂದಗೋಕುಲವೆಂತಲೂ ತನ್ನ ಗೆಳತಿಯರನ್ನು ಗೋಪಿಯರೆಂತಲೂ, ಅಲ್ಲಿನ ಐದುಲಕ್ಷ ಪ್ರಜೆಗಳೇ ಗೋಪಾಲಕರೆಂತಲೂ, ದೇವ ಮಂದಿರವನ್ನೇ ನಂದಗೋಪನ ಗೃಹವೆಂತಲೂ ವಟಪತ್ರಶಾಯಿಯೇ ಶ್ರೀಕೃಷ್ಣನೆಂತಲೂ ಭಾವಿಸಿ ವ್ರತವನ್ನಾಚರಿಸಲು ತೊಡಗಿದಳು.

'ಮಾಸಾನಾಂ ಮಾರ್ಗಶೀರ್ಷೋಽಸ್ಮಿ' ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಮಾರ್ಗಶೀರ್ಷಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟಿದ್ದಾನೆ. ಕಾತ್ಯಾಯನೀ ವ್ರತವು ನಡೆದದ್ದು ಈ ಮಾಸದಲ್ಲಿಯೇ. ಅದರಂತೆ ಗೋದಾದೇವಿಯು ಉಷಃಕಾಲಕ್ಕೆ ಮುಂಚೆಯೇ ಎದ್ದು ತನ್ನ ಸಖಿಯರನ್ನೆಬ್ಬಿಸುತ್ತಾ ನಂದಗೋಪನ ಮನೆಗೆ ಬಂದು ಅಲ್ಲಿ ಬಾಗಿಲನ್ನು ತೆಗೆಸಿ ಕ್ರಮವಾಗಿ ಒಬ್ಬೊಬ್ಬರನ್ನೇ ಎಬ್ಬಿಸಿ ನಂತರ ನೀಳಾದೇವಿಯ ಜೊತೆಯಲ್ಲಿ ಮಲಗಿದ್ದ ಶ್ರೀಕೃಷ್ಣನನ್ನೆಬ್ಬಿಸಿ, ಅವನನ್ನು ಸಿಂಹಾಸನಾರೋಹಣ ಮಾಡಿಸಿ, ತಮ್ಮ ಪ್ರಾರ್ಥನೆಗಳನ್ನು ಲಾಲಿಸುವಂತೆ ಕೇಳಿಕೊಂಡು ವ್ರತಕ್ಕೆ ಬೇಕಾದ ಸಾಧನಗಳನ್ನೊದಗಿಸಿಕೊಡಲು ಕೇಳಿ ವ್ರತ ಸಮಾಪ್ತಿಯಾದನಂತರ ತಾವು ಪಡೆಯಲಿರುವ ಸತ್ಕಾರಗಳನ್ನು ವಿವರಿಸಿ ತಮ್ಮ ಅಭಿಮತಸಿದ್ಧಿಗಾಗಿ ಶ್ರೀ ಕೃಷ್ಣನ ಹಿರಿಮೆಯನ್ನು ಕೊಂಡಾಡಿ, ತಮಗೂ ಅವನಿಗೂ ಇರುವ ನಿತ್ಯಸಂಬಂಧವನ್ನು ತಿಳಿಹೇಳಿ, ನಂತರ ತಮ್ಮ ಅಪೇಕ್ಷೆಗಳನ್ನು ಯಥಾವತ್ ನಿರೂಪಿಸಿ ಹೇಳಿ ಅದನ್ನು ಉಪೇಕ್ಷಿಸದೆ ಈಡೇರಿಸಿ ಕೊಡಬೇಕೆಂದು ಪ್ರಾರ್ಥಿಸಿ ಅದಕ್ಕೆ ಶ್ರೀ ಕೃಷ್ಣನಿಂದ ಸುಮುಖವಾದ ಭರವಸೆ ಪಡೆದು ಕೃತಕೃತ್ಯಳಾದಳು ಎಂಬುದರ ಸಾರವೇ 'ತಿರುಪ್ಪಾವೈ' ಅಥವಾ 'ಪುಷ್ಪಮಾಲೆ'

ಆಬಾಲವೃದ್ಧರಿಂದ ಮನ್ನಣೆಗೊಂಡಿರುವ ಈ ತಿರುಪ್ಪಾವೈ ಸುಂದರವಾದ ತಮಿಳಿನಲ್ಲಿರುವ ಮುವ್ವತ್ತು ಭಾವಗೀತೆಗಳ ಮಾಲೆ. ಸೊಗಸಾದ ಹಾಗೂ ತಿಳಿಯಾದ ಶೈಲಿ, ನಾನಾರ್ಥಗಳಿಂದ ಕೂಡಿದ ದಿವ್ಯ ಭಾವ, ರಸಮಯವರ್ಣನೆ ಇವುಗಳಿಂದ ಮನೋಹರವಾಗಿದೆ. ಜ್ಞಾನ ದೃಷ್ಟಿಯಿಂದ ಪರಿಶೀಲಿಸಿದಲ್ಲಿ ಅದನ್ನು ಒಂದು ಸಾಂಕೇತಿಕ ಪ್ರಬಂಧವೆನ್ನಬಹುದು, ಏಕೆಂದರೆ ಸ್ಮೃತಿ, ಇತಿಹಾಸ ಹಾಗೂ ಪುರಾಣಗಳ ಸಾರವಾದ ನಾಲ್ಕುಸಾವಿರ ಪ್ರಬಂಧಗಳಲ್ಲಿ ಇದು ಸೇರಿದೆ. ಮಾರ್ಗಶಿರ ವ್ರತವನ್ನು ಮಾಡುವೆನೆಂಬ ವ್ಯಾಜದಿಂದ ಈಕೆ ಈ ದಿವ್ಯ ಪ್ರಬಂಧವನ್ನು ಭಕ್ತರಿಗೆ ಕರುಣಿಸಿದ್ದಾಳೆ. ನಂದಗೋಕುಲದ ವನ್ಯ ಸಂಪತ್ತು ಗೋಸಂಪತ್ತುಗಳ ವರ್ಣನೆಯಲ್ಲದೆ ಈಕೆಯ ಕಲ್ಪನೆಯಲ್ಲಿ ಗೋಪಾಲಕರ ಉದಾತ್ತ ಮನೋಭಾವ, ಶ್ರೀ ಕೃಷ್ಣನಲ್ಲಿದ್ದ ನಿರ್ವ್ಯಾಜ ಪ್ರೇಮ ಮುಗ್ಧ ಗೋಪಿಯರ-ಪ್ರೇಮ-ವಿರಹಗಳು ಕಂಡು ಬಂದಾಗ್ಯೂ ಅವರನ್ನೆಲ್ಲ 'ನೀರಾಡೋಣ ಬನ್ನಿ' ಎಂದು ಕರೆದಿರುವುದರ ಅರ್ಥ ಶ್ರೀಕೃಷ್ಣ ಸಂಶ್ಲೇಷಣವನ್ನು ಪಡೆಯೋಣವೆಂಬುದೇ ಎಂದು ಆಚಾರ್ಯರುಗಳು ಅರ್ಥ ಮಾಡಿದ್ದಾರೆ. ಭಗವದಾರಾಧನೆಗೆ ಹೊರಡುವ ಈಕೆ ಪ್ರತಿಯೊಬ್ಬ ಗೋಪಿಯನ್ನೂ ಎಬ್ಬಿಸಿ ಎಬ್ಬಿಸಿ ಕರೆದೊಯ್ಯುವ ರೀತಿಯನ್ನು ನೋಡಿದರೆ ಈಕೆಯೇ ಹೇಳಿರುವಂತೆ, ಕದವನ್ನು ಮುಚ್ಚಿಕೊಂಡು ಭಗವಂತನನ್ನು ಏಕಾಂತವಾಗಿ ಪಡೆಯುವುದಕ್ಕಿಂತಲೂ ಇತೋಪ್ಯತಿಶಯವಾಗಿ, ಭಗವಂತನ ಭಕ್ತರ ಜೊತೆಗೂಡಿ, ಅವರ ಅನುಭವಗಳನ್ನು ಕಣ್ಣಾರೆ ಕಂಡು ಅವರಿಂದ ಸ್ಫೂರ್ತಿಗೊಂಡು ಅವರೊಡನೆ ಆತನನ್ನು ಸೇರಲಿಚ್ಛಿಸುತ್ತಾಳೆ. ಇದರಿಂದ ಆಕೆಯ ಹೃದಯ ವೈಶಾಲ್ಯದ ಅರಿವಾಗುತ್ತದೆ. ಆದಕ್ಕಾಗಿಯೇ ಪ್ರತಿಯೊಬ್ಬ ಗೋಪಿಯನ್ನೂ ಅವಳವಳ ಗುಣಾತಿಶಯಗಳ, ರೂಪಸೌಂದರ್ಯದ ವರ್ಣನೆ ಮಾಡಿ ಎಬ್ಬಿಸುತ್ತಾಳೆ. ಇಲ್ಲಿ ಅವಳು ಗೋಪಿಯರೆಂದು ಭಾವಿಸಿದವರೆಲ್ಲ ಹರಿದಾಸರುಗಳಾದ ಆಳ್ವಾರರೆಂದು ವ್ಯಾಖ್ಯೆ ಮಾಡುತ್ತಾರೆ.

ತಿರುಪ್ಪಾವೈ ಪ್ರಬಂಧದ ಮೊದಲ ಐದು ಪಾಶುರಗಳು ಕ್ರಮವಾಗಿ ಶ್ರೀ ಮನ್ನಾರಾಯಣನ ಪರ, ವ್ಯೂಹಾ, ವಿಭವ, ಅಂತರ್ಯಾಮಿ ಮತ್ತು ಅರ್ಚಾವತಾರಗಳನ್ನು ಸೂಚಿಸುತ್ತವೆ. ನಂತರದ ಹತ್ತು ಪಾಶುರಗಳಲ್ಲಿ ಹತ್ತು ಆಳ್ವಾರುಗಳನ್ನು ಒಬ್ಬೊಬ್ಬರನ್ನಾಗಿ ಎಬ್ಬಿಸುವುದು ಸೂಚಿತವಾಗಿದೆ. ಇವರು ಯಾರೆಂದರೆ 1) ಪೊಯ್‌ಗೈ ಆಳ್ವಾರ್ 2) ಪೂದತ್ತಾಳ್ವಾರ್ 3) ಪೇಯಾಳ್ವಾರ್, 4) ತಿರುಮಳಿಶೈಪ್ಪಿರಾನ್. 5) ನಮ್ಮಾಳ್ವಾರ್, 6) ಕುಲಶೇಖರ ಪ್ಪೆರುಮಾಳ್. 7) ಪೆರಿಯಾಳ್ವಾರ್, 6)ತೊಂಡರಡಿ ಪ್ಪೊಡಿಯಾಳ್ವಾರ್ 9) ತಿರುಪ್ಪಾಣಾಳ್ವಾರ್ 10) ತಿರುಮಂಗೈ ಆಳ್ವಾರ್

ಇವರೆಲ್ಲಾ ಪರಮಭಾಗವತೋತ್ತಮರು ಜಾತಿ-ಕಾಲ-ದೇಶ-ಗುಣಾತೀತರು. ಶ್ರೀಕೃಷ್ಣ ಸಂಶ್ಲೇಷಣಕ್ಕಾಗಿ ಜನ್ಮವೆತ್ತಿದವರು. ಮಾನವ ಕೋಟಿಯನ್ನು ಉದ್ಧರಿಸಿದವರು. ಇವರಲ್ಲಿ ಪೆರಿಯಾಳ್ವಾರ್‌ರಂತೂ ಭಗವಂತನ ಸಮೃದ್ಧಿಯನ್ನು ವಿಶೇಷವಾಗಿ ಅಪೇಕ್ಷಿಸಿದವರು. ಅಂತಹ ಪೆರಿಯಾಳ್ವಾರರೇ ತನ್ನ ಇಷ್ಟ ಪ್ರಾಪ್ತಿಯ ಉಪಾಯವೆಂದರಿತವಳು ಆಂಡಾಳ್. ಆದ್ದರಿಂದ ಆರನೆಯ ಪಾಶುರದಿಂದ ಹದಿನೈದನೆಯ ಪಾಶುರ ಪೂರ್ತಿ ಆಕೆ ಪ್ರತಿಯೊಬ್ಬ ಆಳ್ವಾರರಗುಣಾತಿಶಯಗಳನ್ನು ವರ್ಣಿಸುತ್ತಾಳೆ.

ಈ ನಲ್ನುಡಿಯ ಪ್ರತಿಪದಾರ್ಥದಲ್ಲೂ ಅಡಗಿರುವ ಸಕಲ ವೇದಾರ್ಥಗಳ ಸಾರವನ್ನು ಜನ ತನ್ನ ಸಂಸ್ಕೃತಿ ಹಾಗೂ ಶಿಕ್ಷಣಗಳಿಗನುಗುಣವಾಗಿ ಆಸ್ವಾದಿಸುತ್ತದೆ. ಸ್ವಲ್ಪವಾಗಿ ಹೇಳಬಹುದಾದರೆ ಇದು ಉಪನಿಷತ್ಸಾರಭೂತವಾದುದು. ವೇದತಾತ್ಪರ್ಯವಾದ ಪುರುಷಾರ್ಥಗಳನ್ನು ಪ್ರತಿಪಾದಿಸುವ ತಿರುಮಂತ್ರ ಚರಮಶ್ಲೋಕ ಮತ್ತು ಮಂತ್ರದ್ವಯಗಳನ್ನು ವಿವರಿಸುತ್ತದೆ. ಸಕಲಾರ್ಥಸಾರಗಳೂ ಇದರಲ್ಲಡಕವಾಗಿರುವುದರಿಂದ ಇದರ ನಿತ್ಯಾನುಸಂಧಾನದಲ್ಲಿ ಮಗ್ನರಾದ ಶ್ರೀರಾಮಾನುಜಾಚಾರ್ಯರು 'ತಿರುಪ್ಪಾವೈ ಜೀಯರ್' ರೆಂದೇ ಪ್ರಸಿದ್ಧಿ ಪಡೆದರು.

ಇದೇ ಆಂಡಾಳ್ ಪ್ರಾಪ್ತವಯಸ್ಕಳಾಗಲು ವಿಷ್ಣುಚಿತ್ತರಿಗೆ ಅವಳ ವಿವಾಹದ ಚಿಂತೆಯುಂಟಾಗುತ್ತದೆ. ಅಷ್ಟು ಹೊತ್ತಿಗೆ ಆಂಡಾಳ್ ಶ್ರೀ ರಂಗರಾಜನನ್ನು ತನ್ನ ಪತಿಯಾಗಿ ಮನಸಾ ವರಿಸುತ್ತಾಳೆ. ಪ್ರತಿನಿತ್ಯ

ತಂದೆಯು ತೋಟದ ಪುಷ್ಪಗಳನ್ನು ಸಂಗ್ರಹಿಸಿ ಸುಂದರ ಮಾಲೆಮಾಡಿ ಮೊದಲು ತಾನು ಧರಿಸಿ ನಂತರ ದೇವರಿಗೆ ಮುಡಿಸುತ್ತಾಳೆ. ಒಮ್ಮೆ ವಿಷ್ಣುಚಿತ್ತರು ಇದನ್ನು ನೋಡಿ ಮಾಲೆ ನಿೂಸಲಾಗಿಲ್ಲವೆಂದು ದುಃಖಿಸಿ ಮಲಗಿಬಿಡುತ್ತಾರೆ. ಆಗ ಶ್ರೀ ಕೃಷ್ಣನು ಕನಸಿನಲ್ಲಿ ಬಂದು 'ನಿನ್ನ ಮಗಳು ನನಗೆ ಅತ್ಯಂತ ಪ್ರೀತ್ಯಾಸ್ಪದಳು. ಅವಳು ಮುಡಿದ ಮಾಲೆ ನನಗೆ ಬಹಳ ಪ್ರಿಯವಾದುದು. ಅದನ್ನು ಮುಡಿಸು' ಎನ್ನುತ್ತಾನೆ. ಆಗ ಇವಳಿಗೆ 'ಶೂಡಿಕುಡುತ್ತವಳ್' ಅಂದರೆ ಮುಡಿದು ಕೊಟ್ಟವಳು ಎಂದು ಹೆಸರು ಬರುತ್ತದೆ.

ತಿರುಪ್ಪಾವೈ ತನಿಯುಲ್ಲಿ

"ಅನ್ನವಯಿಲ್ ಪುದುವೈ ಆಂಡಾಳ್
ರಂಗರ್ಕ್ಕು
ಪನ್ನು ತಿರುಪ್ಪಾವೈ ಪಲ್‌ಪತಿಯಮ್–
ಇನ್ನಿಶೆಯಾಳ್ಪಾಡಿ
ಕೊಡುತ್ತಾಳೈ, ನಪ್ಪಾಮಾಲೈ ಶೂಡಿ
ಕೊಡುತ್ತಾಳೈಚ್ಚೊಲ್

ಎಂದು ಹೇಳಿರುವಂತೆ ಶ್ರೀ ರಂಗನಾಥನಿಗೆ ಭೋಗ್ಯವಾಗಿರುವ ತಿರುಪ್ಪಾವೈಯೆಂಬ ಹಲವು ಪಾಶುರಗಳನ್ನು ಇಂಪಾದ ರಾಗದಿಂದ ಹಾಡಿ ಸಮರ್ಪಿಸಿ ಪುಷ್ಪ ಮಾಲಿಕೆಯನ್ನು ತಾನು ಮೊದಲು ಧರಿಸಿ ನಂತರ ಶ್ರೀರಂಗನಾಥನಿಗೆ ಸಮರ್ಪಿಸಿದವಳನ್ನು ಸೋತ್ರ ಮಾಡು ಎಂಬುದರಿಂದ ಇವಳ ಭಕ್ತಿ ಪ್ರೇಮಗಳ ಹಿರಿಮೆ ಗರಿಮೆಗಳು ವ್ಯಕ್ತವಾಗುತ್ತವೆ.

ಕೊನೆಗೆ ಶ್ರೀ ರಂಗನಾಥನ ಕಡೆಯವರೇ ಬಂದು ನಿಮ್ಮ ಮಗಳನ್ನು ನಮ್ಮ ಸ್ವಾಮಿಗೆ ಕೂಡಿ ಎಂದು ವಿಷ್ಣುಚಿತ್ತರಲ್ಲಿ ಅರಿಕೆ ಮಾಡುತ್ತಾರೆಂಬುದಾಗಿಯೂ ಆಗ ವಿಷ್ಣುಚಿತ್ತರು ಆಂಡಾಳಳನ್ನು ಸಕಲ ವೈಭವಗಳೊಂದಿಗೆ ಕರೆದೊಯ್ಯಲು ಆಂಡಾಳ್ ದೇವಿಯು ಒಂದೊಂದಾಗಿ ಪಾವಟಿಗೆಗಳನ್ನೇರುತ್ತ ಭಗವಂತನಲ್ಲಿ ಐಕ್ಯವಾಗಿ ಬಿಡುತ್ತಾಳೆಂಬುದಾಗಿಯೂ ಐತಿಹ್ಯವಿದೆ.

ಆಂಡಾಳ್ ಚರಿತ್ರೆಯನ್ನು ಅವಲೋಕಿಸಿದಾಗ ಆಳ್ವಾರರುಗಳಿಗೂ, ಪೆರಿಯಾಳ್ವಾರರಿಗೂ, ಆಕೆಗೂ ಇದ್ದ ಪರಸ್ಪರ ಸಂಬಂಧವು ಈ ರೀತಿ ವ್ಯಕ್ತ ಪಡುತ್ತದೆ. ಆಳ್ವಾರರು ಲಕ್ಷ್ಮಣನಂತೆ ಕೈಂಕರ್ಯಪರರು, ಭಗವತ್ಸೇವೆಗೆ ನಿದರ್ಶನವಾಗಿರುವವರು. ಪೆರಿಯಾಳ್ವಾರರಾದರೋ ಭರತನಂತೆ ಭಗವತ್ ಪಾರತಂತ್ರ್ಯಕ್ಕೆ ಉದಾಹರಣೆಯಾದವರು ಆಂಡಾಳ್ ಶತ್ರುಘ್ನನಂತೆ ಭಾಗವತ ಪಾರತಂತ್ರ್ಯಕ್ಕೆ ಉದಾಹರಣೆಯಾದವಳು. ಆಳ್ವಾರರೂ. ಲಕ್ಷ್ಮಣನೂ ಭಗವದನುಭಾವವನ್ನು ಬಯಸಿದರು. ಪೆರಿಯಾಳ್ವಾರ್ ಮತ್ತು ಭರತರಿಬ್ಬರೂ ಭಗವತ್ ಸಮೃದ್ಧಿಯನ್ನು ಬಯಸಿದರು. ಗೋದಾ ದೇವಿಯೂ ಶತ್ರುಘ್ನನೂ ಮಧುರ ಕವಿಗಳಂತೆ ಭಾಗವತಾಭಿಮಾನನಿಷ್ಠರಾಗಿದ್ದರು. ಆಂಡಾಳ್ ಪೆರಿಯಾಳ್ವಾರ್ ಅವರನ್ನೇ ಭಗವಂತನನ್ನು ಕಾಣುವ ಸಾಧನವೆಂದು ನಂಬಿದ್ದಳು.

ಹೀಗೆ ತನ್ನ ಜೀವನವನ್ನೆ ಶ್ರೀ ರಂಗನಾಥನಿಗೆ ಸಮರ್ಪಿಸಿ ಹೂವಿನಿಂದ ನಾರು ಸ್ವರ್ಗವೇರುವಂತೆ ಇಡಿಯ ಶ್ರೀವಿಲ್ಲಿಪುತ್ತೂರನ್ನೇ ಧನ್ಯ ಮಾಡಿದ ಆಂಡಾಳ್ ಚರಿತ್ರೆ ಭಕ್ತ ಸಮುದಾಯಕ್ಕೆ ಬಹು ಪೂಜ್ಯವಾದದು. ತಮಿಳು ಸಾಹಿತ್ಯಕ್ಕೆ ಆಂಡಾಳ್ ಸಲ್ಲಿಸಿರುವ ಸೇವೆ ಅಮೋಘವಾದದು. ಆಂಡಾಳ್ ತಿರುಪ್ಪಾವೈಯನ್ನೇ ಅಲ್ಲದೆ ನಾಯಕೀಗೀತವನ್ನೂ ರಚಿಸಿದ್ದಾಳೆ. ಅಂತಹ ಆಂಡಾಳ್ ದೇವಿಯು ಸ್ಮರಣ ಮಾತ್ರದಿಂದ, ಅವಳ ಪಾಶುರಗಳ ಶ್ರವಣ ಪಠಣ ಮನನಗಳಿಂದ ಶ್ರೀ ಹರಿಯು ನಮ್ಮ ಚಿತ್ತದಲ್ಲಿ ನೆಲೆಸಿ ನಮ್ಮ ಜೀವನ ದಿವ್ಯವಾಗಲಿ ಭವ್ಯವಾಗಲಿ.

"ನೀಳಾ ತುಂಗಸ್ತನಗಿರಿತಟೀ ಸುಪ್ತಮು
ದ್ಬೋಧ್ಯ ಕೃಷ್ಣಮ್
ಪಾರಾರ್ಥ್ಯಂ ಸ್ವಂ ಶ್ರುತಿಶತ ಶಿರಸ್ಸಿದ್ಧ
ಮಧ್ಯಾಪಯನ್ತೀ
ಸ್ವೋಚಿಷ್ಟಾಯಾಂ ಸ್ರಜನಿಗಳಿತಂ ಯಾ
ಬಲಾತ್ಕೃತ್ಯ ಭುಂಕ್ತೇ
ಗೋದಾ ತಸ್ಯೈನಮಃ ಇದಮಿದಂ
ಭೂಯ ಏವಾಸ್ತು ಭೂಯಃ

★

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | | | |
|---|---|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಯಿಂದ | 5–30 | ವರೆಗೆ |
| ಸಹಸ್ರನಾಮಾರ್ಚನೆ | ,, | 5–30 ಗಂಟೆಯಿಂದ | 6–00 | ವರೆಗೆ |
| ಮೊದಲನೆಯ ಗಂಟೆ | ,, | 6–00 ಗಂಟೆಯಿಂದ | 6–30 | ವರೆಗೆ |
| ಸರ್ವದರ್ಶನ | ,, | 6–30 ಗಂಟೆಯಿಂದ ಮಧ್ಯಾಹ್ನ | 1–00 | ವರೆಗೆ |
| ಎರಡನೇ ಗಂಟೆ | ಮಧ್ಯಾಹ್ನ | 1–00 ಗಂಟೆಯಿಂದ | 1–30 | ವರೆಗೆ |
| ಸರ್ವದರ್ಶನ | ,, | 1–30 ರಿಂದ ರಾತ್ರಿ | 7–30 | ವರೆಗೆ |
| ರಾತ್ರಿ ಗಂಟೆ | ರಾತ್ರಿ | 7–00 ರಿಂದ ರಾತ್ರಿ | 8–45 | ವರೆಗೆ |
| ಏಕಾಂತಸೇವೆ, ತೀರ್ಮಾನ | ರಾತ್ರಿ | 8–45 ರಿಂದ ರಾತ್ರಿ | 9–00 | ವರೆಗೆ |

ಗಮನಿಕೆ:– ಶುಕ್ರವಾರಗಳಲ್ಲಿ ಮೇಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಉಂಟು. ಸಹಸ್ರನಾಮಾರ್ಚನೆಯ ಟಿಕೆಟ್ ಬೆಲೆ 6–50 ರೂ. ಒಂದು ಟಿಕೆಟ್ಟಿಗೆ ನಾಲ್ವರು ಅನುಮತಿಸಲ್ಪಡುತ್ತಾರೆ.

ಸರ್ವದರ್ಶನದ ಸಮಯದಲ್ಲಿ 1–50 ರೂ. ಟಿಕೆಟ್ಟಿನಿಂದ ಭಕ್ತರು ಅಷ್ಟೋತ್ತರ ಅರ್ಚನೆ ನಡೆಸಿಕೊಳ್ಳಬಹುದು.

**ಪೇಷ್ಕಾರ್.**

# ನಿಮ್ಮ ಭವಿಷ್ಯ

ಡಾ॥ ಅರ್ಕ ಸೋಮಯಾಜಿ.



## ಮೇಷ :

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

ಈ ರಾಶಿಯಲ್ಲಿ ಹುಟ್ಟಿದ ಜನರು ಈ ತಿಂಗಳು ಪೂರ್ತಿ ಸುಖ ಸಂತೋಷಗಳನ್ನು ಹೊಂದಿ, ಕಾರ್ಯಜಯ ಗಳಿಸುವರು. ಆರೋಗ್ಯಭಾಗ್ಯದಿಂದ ಇರುವರು. ಒಳ್ಳೆಯ ಸ್ನೇಹಿತರು ದೊರಕಿದರೂ, ಕುಜನರಿಂದಾಗಿ ಸ್ವಲ್ಪ ವಿವಾದ.



## ವೃಷಭ :

( ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ಹಿರಿಯರಿಂದ ಪ್ರಶಂಸೆ. ಬಂಧು ಆಗಮನ ಮಕ್ಕಳಿಂದಾಗಿ ಸ್ವಲ್ಪ ಚಿಂತೆ. 13 ರನಂತರದ ದಿನಗಳು ಪೂರ್ಣ ಹಿಳಿತು. ಯಶ, ಧನ ಲಾಭಗಳಾದರೂ 13 ರ ಮೊದಲು ತುಸು ಅನಾರೋಗ್ಯ ಹಾಗೂ 23 ರವರೆಗೆ ಕಿರು ವಿವಾದ. ಒಟ್ಟಿನಲ್ಲಿ ಈ ತಿಂಗಳು ಸುಖ ದಾಯಕ.



## ಮಿಥುನ :

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ಈ ರಾಶಿಯಲ್ಲಿ ಜನಿಸಿದವರು ಧನನಷ್ಟದಿಂದಾಗಿ ಅಥವಾ ಬಂಧುಗಳಿಂದಾದ ತೊಂದರೆಯಿಂದ ಅಥವಾ ಆಪ್ತರಿಂದ ಬೇರ್ಪಟ್ಟು ಅಥವಾ ತುಸು ಅನಾರೋಗ್ಯದಿಂದ ಅಥವಾ ಅತೃಪ್ತಿಯಿಂದ ಅಥವಾ ಅಪಮಾನದಿಂದ ತುಸು ಚಿಂತೆಯನ್ನನುಭವಿಸುವರು. ಆದರೂ 21 ರನಂತರ ಸಮತೋಲನ, ಪ್ರಣಯಭಾವ ಹೊಂದುವರು.



## ಕರ್ಕಾಟಕ :

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ಈ ರಾಶಿಯ ಜನರು ದೂರಪ್ರದೇಶಗಳಿಗೆ ಪ್ರಯಾಣವಾಗುವರು. ತುಸು ಉದರ ಬೇನೆ ಯಾಗಬಹುದು. 21 ರನಂತರ ಕೆಲವು ವಿವಾದಗಳುಂಟಾಗಿ ಸ್ತ್ರೀಯರಿಂದಾಗಿ ಅಥವಾ ಹೆಂಡತಿಯ ಅತೃಪ್ತಿಯಿಂದಾಗಿ ಚಿಂತೆ ಉಂಟಾಗಬಹುದು. ಆದರೂ ಕ್ರಿಯಾಶೀಲರಾಗಿ ಯಶವನ್ನು ಪಡೆದು,ಸಾರ್ವಜನಿಕ ಘನತೆ ಹೊಂದವರು. ಕುಜನರು ಅಸೂಯೆ ಹೊಂದಿದರೂ ಧಾರ್ಮಿಕ ಪ್ರವರ್ತನೆ ಸೂಚಿತವಾಗಿದೆ.



## ಸಿಂಹ :

(ಮಖ, ಪೂರ್ವ ಫಾಲ್ಗುಣ ಉತ್ತರ 1ನೇ ಪಾದ:)

ಧನಲಾಭವಾದರೂ ಆಯಕ್ಕಿಂತಲೂ ವ್ಯಯ ಹೆಚ್ಚು. ಹೆಂಡತಿಯ ಅತೃಪ್ತಿ ಅಥವಾ ತುಸು ಉದರ ಬೇನೆ. 13 ರನಂತರ ಪ್ರಯಾಣ ಸೂಚಿತವಾಗಿದೆ. 21ರಮೊದಲು ಹಲವು ರೀತಿಯ ವಿವಾದ ಉಂಟಾಗಬಹುದಾದರೂ ಯಶವನ್ನು ಪಡೆಯುವರು. ಒಟ್ಟಿನಲ್ಲಿ ಅಸಾಧಾರಣವಲ್ಲದ ಶಾಂತಿಯುತವಾದ ತಿಂಗಳು.



## ಕನ್ಯಾ :

(ಉತ್ತರ 2,3,4, ಪಾದ, ಹಸ್ತ ಚಿತ್ತ 1,2 ಪಾದ)

13 ರ ಮೊದಲು ತುಸು ಅನಾರೋಗ್ಯ. ನಂತರ ಒಳ್ಳೆಯ ಆರೋಗ್ಯ. ಧನಾಗಮ, ಯಶ, ಪ್ರಸಿದ್ಧಿ, ಆಗಾಗ ಪ್ರಯಾಣವಿದ್ದರೂ ಆ ಮೂಲಕವಾದ ಪ್ರಯಾಸವಿಲ್ಲ. 21 ರ ನಂತರ ಹೆಂಡತಿಯ ಅಸಂತೃಪ್ತಿ. ಆಪ್ತರಿಂದ ಬೇರ್ಪಡೆ, ಗೃಹ ಕಲಹ.



## ತುಲಾ :

(ಚಿತ್ತ 3,4ಪಾದ ಸ್ವಾತಿ, ವಿಶಾಖಾ1,2,3 ಪಾದ)

ವಿವಾದ ಅಥವಾ ತುಸು ಅನಾರೋಗ್ಯ. ಮಕ್ಕಳ ಬಗ್ಗೆ ಸ್ವಲ್ಪ ಚಿಂತೆ. ಆದರೂ ಬಂಧು ಮಿತ್ರರ ಒಳ್ಳೆಯ ಸಹಯೋಗವಿದೆ. ಆ ಮೂಲಕವಾದ ಪ್ರಯಾಣವೂ ಆಗಾಗ ಘಟಿಸುವುದು. 21 ರವರೆಗೆ ಗೃಹಕೃತ್ಯದಲ್ಲಿ ವಿವಾದ ನಂತರ ಸಂತೋಷ ಧನಲಾಭ.



## ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಈ ರಾಶಿಯಲ್ಲಿ ಜನಿಸಿದವರು ಈ ತಿಂಗಳು ಒಳ್ಳೆಯ ಕಾಲವನ್ನು ಕಾಣುವರು. ಧನ ಲಾಭ, ಯಶಸ್ಸು, ಒಳ್ಳೆಯ ಆರೋಗ್ಯ. ಅಧಾರ್ಮಿಕ ಹಾಗೂ ಪಾಪ ಪ್ರವರ್ತನೆ. ಹೊಸ ಉಡುಪು. 21 ರನಂತರ ಶ್ರೀಮಂತರ ಸ್ನೇಹ ಆ ಮೂಲಕವಾಗಿ ಕುಮಾರ್ಗದಲ್ಲಿ ತೊಡಗುವುದರಿಂದ ಭಯ. ತಿಂಗಳಿನ ದ್ವಿತೀಯಾರ್ಧದಲ್ಲಿ ತುಸು ಅನಾರೋಗ್ಯ.



## ಧನುಸ್ಸು :

(ಮೂಲಾ, ಪೂ. ಉ. 1 ನೇ ಪಾದ)

ಯಥೇಚ್ಛ ಧನವ್ಯಯ ಅಥವಾ ಧನನಷ್ಟ 13 ರನಂತರ ಸ್ಥಾನ ಬಲ ಹೆಚ್ಚು. ತುಸು ಅನಾರೋಗ್ಯ ಹಾಗೂ ತುಸು ಚಿಂತೆ ಆದರೂ ಗೃಹಸೌಖ್ಯ ಹಾಗೂ ಅಧಿಕೃತ ಗೌರವ. 21 ರ ಮೊದಲು ಅಧಾರ್ಮಿಕ ಪ್ರವರ್ತನೆಯಿಂದ ಕುಮಾರ್ಗದಲ್ಲಿ ಧನ ಗಳಿಸುವಂತಹ ಸ್ನೇಹ ದೊರೆಯುವುದು,



**ಮಕರ :**

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

13 ರವರೆಗೆ ಈ ರಾಶಿಯವರಿಗೆ, ಪ್ರಯಾಣ ಪ್ರವಾಸ ಅಥವಾ ತುಸು ಉದರ ಬೇನೆ ಹಲವು ವಿವಾದಗಳುಂಟಾಗಬಹುದು ಅಥವಾ ಅಧಿಕೃತ ಚಿಂತೆ. ಮನೆಯಲ್ಲಿ ಕಳ್ಳತನವಾಗ ಬಹುದು. 21 ರನಂತರ ಕೆಟ್ಟ ಸಲಹೆ ಯಿಂದಾಗಿ ಧನನಷ್ಟ. ಪಾಪಪ್ರವರ್ತನೆ.



**ಕುಂಭ :**

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3 ಪಾ)

ಈ ರಾಶಿಯ ಜನರಿಗೆ ಈ ತಿಂಗಳಲ್ಲಿ ಚಿತ್ತ ಶಾಂತಿಯಿಲ್ಲ. 13 ರನಂತರ ಪ್ರಯಾಣ ಪ್ರಯಾಸ ಅಥವಾ ಧನನಷ್ಟ. 21 ರವರೆಗೆ ದುಷ್ಟ ಸಹವಾಸ. 23 ರನಂತರ ತುಸು ಒಳಿತು. ಪ್ರಾರ್ಥನಾಮನೋಭಾವ ಒಳಿತು.



**ಮೀನ :**

(ಪೂ. ಭಾ. 4 ಪಾದ ಉ. ಭಾ. ರೇವತಿ)

ಪ್ರಯಾಣ. ಪ್ರಣಯಭಾವ. ಆದರೆ ಧನನಷ್ಟ ಅಥವಾ ಹೆಂಡತಿಯ ಅತೃಪ್ತಿ 13 ರವರೆಗೆ ಕಾರ್ಯಜಯ. 21 ರಮೊದಲು ವಿವಾದ ಅಥವಾ ಸಿಸ್ಪೃಹೆ ಅನಂತರ ಚಿತ್ತ ಶಾಂತಿ. ಒಟ್ಟಿನಲ್ಲಿ ಅಸಾಧಾರಣ ಘಟನೆಗಳಿಲ್ಲದೆ ತಿಂಗಳು ಕಳೆಯುವುದು.

---

## ನಿಮಗಿದು ತಿಳಿದಿದೆಯೇ?

ಉತ್ತರಗಳು

1) ತಾಳ್ಳಪಾಕ
1) ಮಟ್ಲಕುಮಾರ ಅನಂತರಾಯ
3) ಹನ್ನೆರಡು
4) ನರಹರಿತೀರ್ಥರು
5) ತುಲಸೀದಾಸರು
6) ರುದ್ರಭಟ್ಟ
7) ರಾಮಧಾನ್ಯಚರಿತೆ
8) ಪಂಚರಾತ್ರ
9) ಹರಿಹರ
10) ಸುಮಿತ್ರೆ
11) ಸಂಪಾತಿ
12) ಸತ್ರಾಜಿತ
13) ಅಕ್ಷಯತೂಣೀರ, ಗಾಂಡೀವ
14) ಮೈಸೂರು
15) ಶಬರಿ

## ಸನಾತನ ಧರ್ಮರಂಗ.

### ಹರಿದಾಸ ವಾಙ್ಮಯ

ಉತ್ತರಗಳು

**ಎಡದಿಂದ ಬಲಕ್ಕೆ**

1. ಲಕ್ಷ್ಮೀನಾರಾಯಣಮುನಿ
5. ವೃತ್ತನಾಮ
6. ದಾಸ
8. ಕನಕದಾಸ
9. ವಾದಿರಾಜ
12. ವೇಣುಗೀತೆ
14. ನರಹರಿ
15. ರಂಗವಿಠಲ
16. ಕುಹು
20. ಭಕ್ತಿ
21. ವಿಜಯದಾಸ
22. ಕೃಷ್ಣ
23. ಮಧ್ವ

**ಮೇಲಿನಿಂದ ಕೆಳಕ್ಕೆ**

2. ನಾನೇಕೆ ಬಡವನು ?
3. ವ್ಯಾಸರಾಯ
4. ಭ್ರಮರಗೀತೆ
7. ಗೋಪೀಗೀತೆ
10. ಪುರಂದರದಾಸ
11. ಮೋಹನ ತರಂಗಿಣಿ
13. ಜಗನ್ನಾಥದಾಸ
17. ಭಾಗವತ
18. ಕಾಗಿನೆಲೆ
19. ತಂತ್ರಸಾರ

ವಾರ್ತಾಲಹರಿ (4ನೇ ಪುಟದಿಂದ ಮುಂದುವರಿದದ್ದು)

## ಜನವರಿ ೧ ರಂದು ೧೦ ಲಕ್ಷ ರೂ. ಆದಾಯ.

ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ 1981 ನೇ ಜನವರಿ 1 ರಂದು 10.4 ಲಕ್ಷ ರೂ. ಗಳ ಆದಾಯ ಉಂಟಾಯಿತು. ಒಂದು ದಿನದಲ್ಲಿ ಸುಮಾರು 40 ಸಾವಿರ ಜನರು ಸ್ವಾಮಿ ದರ್ಶನ ವನ್ನು ಪಡೆದರು.

ಹೋದ ವರ್ಷ 1980 ರ ಜನವರಿ 1 ರಂದು ಒಟ್ಟು 7 ಲಕ್ಷ ರೂ ಗಳ ಆದಾಯವಿದ್ದಿತೆಂಬುದು ದಾಖಲೆಗಳಿಂದ ತಿಳಿದು ಬರುವ ಅಂಶ.

ಈ ವರ್ಷದ ಸಂಚಯನದಲ್ಲಿ 4.85 ಲಕ್ಷ ರೂ ಹುಂಡಿಯ ವಸೂಲಾತಿ, 3.4 ಲಕ್ಷ ರೂ.ಗಳು ಪ್ರಸಾದ ಮಾರಾಟದಿಂದಲೂ, 2.15 ಲಕ್ಷ ರೂ ಗಳು ವಿಶೇಷದರ್ಶನ ಟಿಕೆಟ್ ಮಾರಾಟದಿಂದಲೂ ಉಂಟಾದದ್ದು ಎಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ತಿಳಿಸಿದರು.

★ ★

ಜನವರಿ 9 ನೇ ದಿನದಂದು ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯದ ಹುಂಡಿಯಲ್ಲಿ ಒಬ್ಬ ಅಜ್ಞಾತ ಭಕ್ತರು ನೂರು ರೂ. ಗಳ ನೋಟಿನ ಕಟ್ಟೊಂದನ್ನು ಹಾಕಿದ್ದುದ್ದು ಕಂಡುಬಂದಿದೆ. ಕಟ್ಟಿ ನಲ್ಲಿದ್ದ ಒಟ್ಟು ಹರಕೆಯ ಹಣ ಎಂದರೆ ಒಂದು ಲಕ್ಷ ರೂ.ಗಳು.

## ಸಾಂಸ್ಕೃತಿಕೋತ್ಸವ.

ಆಂಧ್ರಪ್ರದೇಶದ ರಸ್ತೆಸಾರಿಗೆ ಸಂಸ್ಥೆಯವರು ತಿರುಪತಿಯ ತ್ಯಾಗರಾಜ ಮಂಟಪದಲ್ಲಿ ಮೂರು ದಿನಗಳ ಉತ್ಸಾಹದ ನಡುವೆ ಸಾಂಸ್ಕೃತಿಕೋತ್ಸವ ವನ್ನು ಆಚರಿಸಿದರು.

ಉತ್ಸವದ ಉದ್ಘಾಟನೆಯಲ್ಲಿ 'ಕಲಾಜ್ಯೋತಿ' ಯನ್ನು ಹಚ್ಚಿದ ತಿ. ತಿ. ದೇ. ಕಾರ್ಯನಿರ್ವಹ ಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ತಿರುಪತಿಯಲ್ಲಿ 'ಸಿಟಿ ಬಸ್ ಸರ್ವೀಸ್' ಅನ್ನು ಚಾಲ್ತಿಗೊಳಿಸಬೇಕೆಂದು ಆರ್. ಟಿ. ಸಿ. ಯವರಿಗೆ ಹೇಳಿದರು.

ಆಂಧ್ರಪ್ರದೇಶ ಮಂತ್ರಿವರ್ಗದ ಶ್ರೀ ಎನ್. ಶ್ರೀನಿವಾಸುಲುರೆಡ್ಡಿ ಅವರು ಮುಖ್ಯ ಅತಿಥಿ ಯಾಗಿದ್ದ ಸಭೆಯಲ್ಲಿ 'ನೀರಿನ ಕೊರತೆ ಇದ್ದರೂ ರಾಯಲಸೀಮೆಯಲ್ಲಿ ಸಾಂಸ್ಕೃತಿಕ ಶ್ರೀಮಂತತೆ ಇದೆಯೆಂದು' ವಿಧಾನಸಭಾ ಶ್ರೀ ಬಿ. ಟಿ. ಎಲ್. ಎಸ್. ಚೌದರಿ ಅವರು ನುಡಿದರು. ಸ್ಥಳೀಯ ಪ್ರತಿನಿಧಿ ಶ್ರೀ. ಈಶ್ವರ ರೆಡ್ಡಿಯವರೂ ಮಾತನಾಡಿದರು.

## ವೇದಗಳ ಉನ್ನತ ಶಿಕ್ಷಣ.

ತಿರುಮಲೆ ತಿರುಪತಿ ದೇವಸ್ಥಾನಗಳು ವೇದ ಗಳ ಬಗ್ಗೆ ಉನ್ನತ ಶಿಕ್ಷಣವನ್ನು ಆರಂಭಿಸಲು ಯೋಜಿಸಿದೆ.

ವೇದಗಳಲ್ಲಿ 12 ವರ್ಷ ಅಧ್ಯಯನ ಮಾಡಿದ ವಿದ್ಯಾರ್ಥಿಗಳನ್ನು ಈ ಉನ್ನತ ಶಿಕ್ಷಣಕ್ಕೆ ತೆಗೆದು ಕೊಳ್ಳಲಾಗುವುದು ಮತ್ತು ಅವರಿಗೆ ತಿಂಗಳಿಗೆ 500 ರೂಗಳ ವಿದ್ಯಾರ್ಥಿ ವೇತನವನ್ನು ನೀಡಿ, ವಿದ್ಯಾಪೂರ್ಣರಾದನಂತರ 750 ರೂ. ಗಳ ಮಾಸಿಕ ವೇತನದ ಉದ್ಯೋಗವನ್ನೂ ನೀಡಲಾ ಗುವುದು ಎಂದು ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ತಿಳಿಸಿದರು.

## ಕವಿವಂದನಾ ಸಮಾರಂಭ

1980 ರ ಡಿಸೆಂಬರ್ 27 ರಂದು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ತಿ.ತಿ.ದೇ. ಗಳ ವಿವಿಧ ಕಲಾಶಾಲೆಯಾದ ಶ್ರೀ ವೆಂಕಟೇಶ್ವರ ಕಲಾಪೀಠದವರು ಹಿರಿಯ ಸಂತ ಕವಿ ಜಯ ದೇವನ ಸಂಸ್ಮರಣೆಯಲ್ಲಿ ಒಂದು ಸಾಂಸ್ಕೃತಿಕ ಸಂಜೆಯನ್ನೇರ್ಪಡಿಸಿದ್ದರು. ಜಯದೇವನ 'ವೇದಾನುದ್ಧರತೇ' ಹಾಡನ್ನು ಉಪೋದ್ಘಾತವಾಗಿ ಶ್ರೀರಜನೀಕಾಂತರಾಯರು ಹಾಡಿ, ಸಭಿಕರನ್ನು ಸ್ವಾಗತಿಸಿ, ಮುಖ್ಯ ಉಪನ್ಯಾಸಕರ ಪರಿಚಯ ನೀಡಿದರು. ಕಲಾಪೀಠದ 'ಸಭಾರಂಜನಿ' ಸಮು ದಾಯದವರು ಜಯದೇವನ ಅಷ್ಟಪದಿಗಳಲ್ಲಿನ ದಶಾವತಾರ ಗೀತೆಗಳನ್ನು ಹಾಡಿದರು.

ಪ್ರಾಚ್ಯ ಸಂಶೋಧನ ಸಂಸ್ಥೆಯ ಉಪ ಪ್ರಾಧ್ಯಾಪಕ ಡಾ॥ ಶ್ರೀಧರಬಾಬು ಅವರು ಜಯ ದೇವನ ವಿಶಿಷ್ಟ ಕಾವ್ಯ ಪ್ರತಿಭೆಯನ್ನು ಕುರಿತು ಮಾತನಾಡಿದರು. ಜಯದೇವನ ಕಾವ್ಯ ಭಾರತೀಯ ರಸಿಕ, ಪಂಡಿತರನ್ನು ಆಕರ್ಷಿಸಿದ್ದಷ್ಟೇ ಅಲ್ಲದೆ ಪಾಶ್ಚಿಮಾತ್ಯ ಪಂಡಿತಕವಿ ವಿಮರ್ಶಕರಾದ ಗಯಟೆ, ಎಡ್ವಿನ್ ಆರ್ನಾಲ್ಡ್ ಜೋನ್ಸ್ ಮುಂತಾ ದವರನ್ನು ತಮ್ಮ ಭಾಷೆಗೆ ಅನುವಾದ ಮಾಡಲು ಪ್ರಯತ್ನ ಪಡುವಷ್ಟು ಆಕರ್ಷಿಸಿತೆಂದರು.

ಶ್ರೀ ಮಂಚಾಲ ಜಗನ್ನಾಥರಾಯರು ಜಯ ದೇವನ ಭಕ್ತಿ ಶೃಂಗಾರ ಹೇಗೆ ಅನ್ನಮಾಚಾರ್ಯನ ಸಹಸ್ರಾರು ಗೀತೆಗಳ ಸಾರವಾಯಿತೆಂದು ತಿಳಿಸುತ್ತ ತನ್ನ 'ಸಂಕೀರ್ತನ ಲಕ್ಷಣ'ದಲ್ಲಿ ಅನ್ನಮಾ ಚಾರ್ಯನು ದೈವ ಶೃಂಗಾರವನ್ನು ಮೊದಲಿಗೆ ಚಿತ್ರಿಸಿದವನು ಜಯದೇವನೆಂದು ತಿಳಿಸಿರುವುದನ್ನು ವಿವರಿಸಿದರು.

ಶ್ರೀಮತಿ ಜಯಮಣಿ ನರಸಿಂಹನ್, ಕುಮಾರಿ ವಿ. ವಿ. ರಾಣಿ, ಶ್ರೀ ಪೆರುಪಲ್ಲಿ ಶ್ರೀರಂಗನಾಥ್, ಶ್ರೀ ನಾಗೇಶ್ವರನಾಯುಡು, ಶ್ರೀ ರಜನೀಕಾಂತ ರಾಯರು ಸಭೆಯನ್ನು ಜಯದೇವನ ಹಾಡುಗ ಳಿಂದ ರಂಜಿಸಿದರು.

## ಬಂಗಾರದ ಕಲಶದ ಗೋಪುರಗಳು

ಶ್ರೀನಿವಾಸಮಂಗಾಪುರ, ನಾಗಲಾಪುರ, ನಾರಾಯಣವನಗಳಲ್ಲಿನ ದೇವಾಲಯಗಳಲ್ಲಿ ಬಂಗಾರದ ಲೇಪನದ ಕಲಶಗಳ ಗೋಪುರಗಳನ್ನು ನಿರ್ಮಿಸಬೇಕೆಂದು ತಿ. ತಿ. ದೇ. ತೀರ್ಮಾನಿಸಿದೆ.

ಶ್ರೀ ವೆಂಕಟೇಶ್ವರಸ್ವಾಮಿಯ ಬಂಗಾರದ ರಥ ನಿರ್ಮಾಣಕಾರ್ಯ ತ್ವರಿತಗತಿಯಲ್ಲಿ ನಡೆದಿದೆ.

## ತಿರುಮಲೆಗೆ ರಾಷ್ಟ್ರಪತಿ

ಭಾರತದ ರಾಷ್ಟ್ರಪತಿ ಡಾ॥ ನೀಲಂ ಸಂಜೀವ ರೆಡ್ಡಿ ಅವರು ತಿರುಪತಿಗೆ ದಿನಾಂಕ 26 ರಂದು ಆಗ ಮಿಸಿದರು. ಅಲ್ಲಿ ರೈಲ್ವೆ ಬೋಗಿಗಳ ಕಾರ್ಯಾಗಾರದ ಶಂಕುಸ್ಥಾಪನೆ ನಡೆಸಿ ನೇರವಾಗಿ ತಿರುಮಲೆಯನ್ನು ಸೇರಿದರು. ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ಎನ್. ರೆಡ್ಡಿ, ಮುಜರಾಯಿ ಇಲಾಖಾ ಕಮೀಷನರ್ ಶ್ರೀ ಚಂದ್ರಮೌಳಿ ರೆಡಿ, ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್ ಕೆ. ಪ್ರಸಾದ್ ಅವರುಗಳು ಡಾ॥ ಸಂಜೀವರೆಡ್ಡಿ ಅವರನ್ನು ಆಲಯಮರ್ಯಾದೆಗಳೊಂದಿಗೆ ಸ್ವಾಗತಿಸಿದರು.

ತಿರುಮಲೆಯಲ್ಲಿ ರಾಷ್ಟ್ರಪತಿಯವರು ಗುರುವಾರ ಸಂಜೆಯ ಪೂಲಂಗಿ ಸೇವೆಯಲ್ಲೂ ಶುಕ್ರವಾರ ಬೆಳಗ್ಗೆ ಅಭಿಷೇಕದಲ್ಲೂ ಪಾಲುಗೊಂಡು ಸುಮಾರು 2 ಗಂಟೆಗಳ ಕಾಲ ದೇವಸ್ಥಾನದಲ್ಲಿ ಇದ್ದರು.

ತಿರುಮಲೆಯ ಆರ್ಷಸದಸ್ಸಿನಲ್ಲಿ ದೇವಸ್ಥಾನಗಳ ವಸ್ತು ಸಂಗ್ರಹಾಲಯವನ್ನು ಉದ್ಘಾಟಿಸಿದ ರಾಷ್ಟ್ರಪತಿಯವರು ತಿ.ತಿ.ದೇ. ಪ್ರಕಟನ ಶಾಖೆಯ ಹೊಸ ಪುಸ್ತಕಗಳನ್ನೂ ಬಿಡುಗಡೆ ಮಾಡಿದರು. ಒಳರಕ್ಷಾಪುಟಗಳಲ್ಲಿ ತತ್ಸಂಬಂಧಿ ಚಿತ್ರಗಳನ್ನೂ ನೋಡಬಹುದು.

# ಸಪ್ತಗಿರಿ ಚಂದಾದಾರರಲ್ಲಿ

ವಾರ್ಷಿಕ ಚಂದಾ ರೂ. 6–00

ಸಪ್ತಗಿರಿ ಮಾಸಪತ್ರಿಕೆಯ ಚಂದಾದಾರರುಗಳಲ್ಲಿ ಕೆಳಕಂಡವರ ಚಂದಾಗಳು 31-3-81 ತಾರೀಖಿಗೆ ಮುಗಿಯಲಿವೆ. ಚಂದಾದಾರರು ಸಹಾನುಭೂತಿಯಿಂದ ಹಣವನ್ನು ಮನಿಯಾರ್ಡರು ಮೂಲಕ ಕಳುಹಿಸಿ ಕೊಡಬೇಕೆಂದು ಕೋರುತ್ತೇವೆ. ಚಂದಾದಾರರು ದಯವಿಟ್ಟು ಮನಿಯಾರ್ಡರು ಕೂಪನಿನಲ್ಲಿ ತಮ್ಮ ಚಂದಾ ಸಂಖ್ಯೆಯನ್ನು ನಮೂದಿಸಬೇಕು.

12, 41, 119, 128, 181 (A), 184, 185, 188, 264, 265, 266, 269, 290, 486, 532, 551, 556, 559, 999 to 1007, 1009 to 1013, 1015, 1016 to 1021, 1024 to 1027, 1029 to 1031, 1033, 1031 (A), 1032, 1033 (A), 1034 to 1039, 1041, 1042, 1044 to 1046, 1048, 1049, 1070

ಚಂದಾ ಹಣವನ್ನು ಎಮ್. ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು. ಚೆಕ್ಕುಗಳನ್ನು ಕಳುಹಿಸಿದ್ದಲ್ಲಿ, ಅಥವಾ ವಿಳಾಸ ತಪ್ಪಿದ್ದಲ್ಲಿ, [ಆಗುವ ಆಲಸ್ಯಕ್ಕೆ ಯಾವ ವಿಧದಲ್ಲೂ ಈ ಕಾರ್ಯಾಲಯ ಬಾಧ್ಯತೆ ವಹಿಸಲಾರದು. ಚಂದಾದಾರರೆಲ್ಲರೂ ಸಹೃದಯತೆಯಿಂದ ಚಂದಾ ಕಳುಹಿಸಬೇಕೆಂದು ವಿನಂತಿ. ಮಿಕ್ಕ ವಿವರಗಳಿಗೆ :

ವೆಲ್‌ಫೇರ್ ಆಫೀಸರ್,
ಸೇಲ್ಸ್ ವಿಂಗ್,
ತಿ. ತಿ. ದೇ. ಪ್ರೆಸ್ ಕಾಂಪೌಂಡ್
ತಿರುಪತಿ.

## ೩೧೦ ನೆಯ ಗೀತಾಜ್ಞಾನಯಜ್ಞ

ಶ್ರೀಶ್ರೀ ಚಿನ್ಮಯಾನಂದರ ನೇತೃತ್ವದಲ್ಲಿ 310 ನೆಯ ಗೀತಾಜ್ಞಾನ ಯಜ್ಞವು ತಿರುಪತಿಯ ತಿ.ತಿ.ದೇ ಆಡಳಿತ ಕಚೇರಿಯ ಹಿಂಭಾಗದ ಬಯಲಿನಲ್ಲಿ ದಿನಾಂಕ 19–1–81 ರಿಂದ 28–1–81 ರವರೆಗೆ ತಿ.ತಿ.ದೇ. ಹಾಗೂ ಚಿನ್ಮಯ ಮಿಷನ್ನಿನ ತಿರುಪತಿ ಶಾಖೆಯ ಸಂಯುಕ್ತ ಆಶ್ರಯದಲ್ಲಿ ನಡೆಯಿತು.

19–1–81 ರಂದು ನಡೆದ ಉದ್ಘಾಟನಾ ಸಮಾರಂಭದಲ್ಲಿ ಮಾತನಾಡುತ್ತ ಗೀತೆಯು ಕರೆಗೆ ಓಗೊಡಬೇಕೆಂದು ಶ್ರೀ ಚಿನ್ಮಯಾನಂದರು ಸಾರ್ವಜನಿಕರಲ್ಲಿ ಕಳಕಳಿಯಿಂದ ಮನವಿ ಮಾಡಿಕೊಂಡರು ಸಭೆಯನ್ನು ಸ್ವಾಗತಿಸಿದ ತಿರುಪತಿಯ ಚಿನ್ಮಯ ಮಿಷನ್ನಿನ ಶ್ರೀ ಬಲರಾಮರೆಡ್ಡಿ ಅವರು ತಿರುಪತಿಯ ಜನಕ್ಕೆ ಇದೊಂದು ಆತ್ಮೋದ್ಧಾರದ ಹಾದಿ ಎಂದು ವಿವರಿಸಿದರು ಶ್ರೀ ಪಿ.ವಿ.ಆರ್.ಕೆ ಪ್ರಸಾದರು ಮಾತನಾಡುತ್ತ ಶ್ರೀಚಿನ್ಮಯಾನಂದರ ಅಮೃತ ಉಪದೇಶವನ್ನು ಕೇಳಿ ನಡೆಯುವ ಧನ್ಯತೆಯ ಅವಕಾಶ ಒದಗಿ ಬಂದದ್ದಕ್ಕೆ ಶ್ರೀ ವೆಂಕಟೇಶ್ವರ ಸ್ವಾಮಿಗೆ ಕೃತಜ್ಞತೆ ಅರ್ಪಿಸಿದರು. ಶ್ರೀದ್ವಾರಕಾನಾಥ ರೆಡ್ಡಿಯವರು ಉದ್ಘಾಟಿಸಿದ ಯಜ್ಞ ಆದಿನ ಡಾ॥ ಅರ್ಕಸೋಮಯಾಜಿ ಅವರ ವಂದನಾರ್ಪಣೆಯೊಂದಿಗೆ ಮುಗಿಯಿತು.

ತಿ.ತಿ ದೇ. ಗಳ ಹಾಗೂ ಚಿನ್ಮಯಮಿಷನ್ನಿನ ಧಾರ್ಮಿಕ ಪುಸ್ತಕ ಮಾರಾಟಗಳೂ ಈ ಸಂದರ್ಭದಲ್ಲಿ ಏರ್ಪಟ್ಟಿದ್ದು ದಿನದಿನವೂ ಸಭಿಕರು ಹೆಚ್ಚು ಹೆಚ್ಚಿನ ಸಂಖ್ಯೆಯಲ್ಲಿ ಗೀತಾಜ್ಞಾನಯಜ್ಞದಲ್ಲಿ ಭಾಗವಹಿಸಿದರು.

## ಕರ್ನಾಟಕದಲ್ಲಿ...

### ಭಾರತ-ಭಾರತಿ ಪುಸ್ತಕ ಸಂಪದ ಮಂಗಳ ಸಮಾರಂಭ

ಬೆಂಗಳೂರಿನ ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್ತಿನವರ ಕನ್ನಡದ ಎಳೆಯರಿಗಾಗಿ ನಾಡಿನ 280 ಲೇಖಕ ಲೇಖಕಿಯರು ಬರೆದ ಇಪ್ಪತ್ತೊಂದು ಸಾವಿರ ಪುಟಗಳ ಬಾಲ ಸಾಹಿತ್ಯಧಾರೆಯು 510 ನೆಯ ಪುಸ್ತಕದೊಂದಿಗೆ ಮಂಗಳ ಹೊಂದಿತು. ಆ ಸಂಬಂಧದಲ್ಲಿ ಒಂದು ನಿರಾಡಂಬರವಾದ ಆದರೆ ಉತ್ಸಾಹ ಪೂರ್ಣವಾದ ಸಮಾರಂಭವೂ ಏರ್ಪಟ್ಟಿದ್ದಿತು.

ಮಕ್ಕಳಿಗಾಗಿ ಉಂಟಾದ ಪುಸ್ತಕ ಮಾಲೆಯ ಮಂಗಳ ಸಮಾರಂಭಕ್ಕೆ ಸ್ವಾಮಿ ಚಿನ್ಮಯಾನಂದರು ಆಗಮಿಸಿ ಮಕ್ಕಳಿಗಾಗಿ ಶ್ರಮಿಸಿದ ಲೇಖಕ ಲೇಖಕಿಯರನ್ನೂ, ಪ್ರಕಾಶಕರನ್ನೂ, ಮುದ್ರಕರನ್ನೂ ಅಭಿನಂದಿಸಿದ್ದು ಒಂದು ವಿಶೇಷವಾದರೆ ಒಂದೇ ವೇದಿಕೆಯಲ್ಲಿ ಕುಳಿತ ನೂರಾರು ಜನ ಕರ್ತೃಗಳಿಗೆ ಶಾಲು ಹೊದಿಸಿ ಸನ್ಮಾನ ಮಾಡಿದ್ದು ಮತ್ತೊಂದು ವಿಶೇಷ.

ಎಂಟು ವರ್ಷಗಳ ಅವಧಿಯಲ್ಲಿ ಪ್ರಧಾನ ಸಂಪಾದಕ ಶ್ರೀ ಎಲ್. ಎಸ್. ಶೇಷಗಿರಿರಾಯರ ಮಾರ್ಗದರ್ಶನದಲ್ಲಿ ಹೊರಬಂದ 510 ಪುಸ್ತಕಗಳ ಪ್ರದರ್ಶನ, ರಿಯಾಯಿತಿ ದರದಲ್ಲಿ ಮಾರಾಟ, ಲೇಖಕ ಲೇಖಕಿಯರ ಭಾವಚಿತ್ರ ಪ್ರದರ್ಶನಗಳೂ ಏರ್ಪಟ್ಟಿದ್ದು ಪುಸ್ತಕ ಪ್ರದರ್ಶನ ಮಾರಾಟಗಳಲ್ಲಿ ಒಂದು ಹೊಸ ಅಧ್ಯಾಯವನ್ನೇ ತೆರೆದಿತ್ತು.

ರಾಷ್ಟ್ರೋತ್ಥಾನ ಪರಿಷತ್ತಿನ ಅಧ್ಯಕ್ಷ ಶ್ರೀ ಎಂ. ಆನಂದರಾಯರು ಸಭೆಯನ್ನು ಸ್ವಾಗತಿಸಿದರು. "ತಾವು ತಮ್ಮ ಸಹಕಾರ್ಯಕರ್ತರೊಡನೆ ಈ ಒಂದು ಹಿರಿಯ ಕೆಲಸವನ್ನು ಕೈಗೊಂಡು ಮುಗಿಸಿದ ಧನ್ಯಭಾವವನ್ನು ಹೊಂದಿರುವ" ಬಗ್ಗೆ ವಿವರಿಸಿದರು ನಂ. ಮಧ್ವರಾವ್.

ಸ್ವಾಮಿ ಚಿನ್ಮಯಾನಂದರು ಮಾಡುತ್ತ "ಈ ಪುಸ್ತಕಗಳನ್ನು ನಿಮ್ಮ ಮಕ್ಕಳಿಗೆ ಬಳುವಳಿಯಾಗಿ ಕೊಡಿ" ಎಂದು ಸಾರ್ವಜನಿಕರಿಗೆ ಕರೆ ನೀಡಿದರು.

ಮಕ್ಕಳಿಗಾಗಿ ಸಾಹಿತ್ಯ ರಚನೆಯಲ್ಲಿ ಪಾಲುಗೊಳ್ಳಲು ಅವಕಾಶ ನೀಡಿದ್ದಕ್ಕಾಗಿ ಲೇಖಕರ ಪರವಾಗಿ ಶ್ರೀ ಹೊ. ವೆ. ಶೇಷಾದ್ರಿ, ಶ್ರೀ ಸಂತೋಷಕುಮಾರ ಗುಲ್ವಾಡಿ, ಶ್ರೀಮತಿ ಆರ್ಯಾಂಬ ಪಟ್ಟಾಭಿ ಅವರುಗಳು ಕೃತಜ್ಞತೆ ಸಲ್ಲಿಸಿದರು.

ಭಾರತ ಭಾರತಿ ಪುಸ್ತಕ ಸಂಪದ ಇತರ ಭಾರತೀಯ ಭಾಷೆಗಳಲ್ಲಿ ತರಲು ತಿ. ತಿ. ದೇ. ಗಳ ಶ್ರೀನಿವಾಸ ಬಾಲಭಾರತಿ ಪುಸ್ತಕ ಮಾಲೆಯಲ್ಲಿ ಯೋಜಿಸಲಾಗಿದೆ. ಮೊದಲನೆಯದಾಗಿ, ಐವತ್ತು ಪುಸ್ತಕಗಳನ್ನು ತೆಲುಗಿಗೆ ಅನುವಾದಿಸಿ ಪ್ರಕಟಿಸಲಾಗುವುದು. (ಈ ಕಾರ್ಯ ಮುಂದುವರೆದಿದೆ) ನಂತರ ತಮಿಳು, ಮಲೆಯಾಳೀ ಭಾಷೆಗಳಲ್ಲಿ ಬಿಡುಗಡೆಮಾಡಲಾಗುವುದು.

## ರಥಸಪ್ತಮಿ

ಫೆಬ್ರುವರಿ 11 ರಂದು ರಥಸಪ್ತಮಿಯ ಪ್ರಯುಕ್ತ ಅಂದಿನ ಆರ್ಜಿತಸೇವೆಗಳನ್ನು ಮುಂದೂಡಲಾಗಿದೆಯೆಂದು ಪ್ರತಿಕಾವರದಿಯೊಂದು ತಿಳಿಸಿದೆ. ಆದರೆ ವಾಹನ ಸೇವೆಗಳನ್ನು ಮಾತ್ರ ಆಸಕ್ತರು ಮಾಡಿಸಬಹುದು.

Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·



ರಾಷ್ಟ್ರಪತಿ ಡಾ|| ಸಂಜೀವರೆಡ್ಡಿಯವರು ತಿ. ತಿ. ದೇ. ಧಾರ್ಮಿಕ ಸಾಹಿತ್ಯ ಪ್ರಕಟನೆಗಳ ಮತ್ತೊಂದು ಕಂತನ್ನು ಬಿಡುಗಡೆ ಮಾಡಿದರು. 13 ಪುಸ್ತಕಗಳ ಈ ಕಂತಿನಲ್ಲಿ ಕನ್ನಡ, ತೆಲುಗು ಭಾಷೆಗಳ ಪುಸ್ತಕಗಳಿವೆ. ಪುಸ್ತಕ ಬಿಡುಗಡೆಯ ನಂತರ ರಾಷ್ಟ್ರಪತಿಯವರು ಒಳಗೆ ಪ್ರದರ್ಶಿತ ಪುಸ್ತಕಗಳನ್ನು ವೀಕ್ಷಿಸುತ್ತಿದ್ದಾಗ ತೆಗೆದ ಚಿತ್ರ.

# ರಾಷ್ಟ್ರಪತಿಯವರಿಂದ ಪುಸ್ತಕ ಪ್ರಕಟನೆ



ರಾಷ್ಟ್ರಪತಿಗಳಿಗೆ ಪುಸ್ತಕಗಳ ವಿವರಗಳನ್ನು ಪರಿಚಯಿಸುತ್ತ ಶ್ರೀ ಪಿ.ವಿ.ಆರ್.ಕೆ. ಪ್ರಸಾದರನ್ನು ಕಾಣಬಹುದು.

# ತಿ. ತಿ. ದೇವಸ್ಥಾನಗಳು, ತಿರುಪತಿ.



## ಒಂದು ಹಕ್ಕಿನೋಟ

1. ದೇವಸ್ಥಾನಗಳು 42

2. ಸ್ಥಳಾವಕಾಶ
   - ಅ) ಉಚಿತ ಕೊಠಡಿಗಳು 1102
   - ಆ) ಬಾಡಿಗೆ ಕೋಣೆಗಳು, ಮನೆಗಳು 812
   - ಇ) ಅತಿಥಿ ಗೃಹಗಳು 4

3. ಫಲಾಹಾರ ಮಂದಿರಗಳು

4. ಆಸ್ಪತ್ರೆಗಳು 7

5. ಶೈಕ್ಷಣಿಕ ಸಂಸ್ಥೆಗಳು
   - ಅ) ಸಂಸ್ಕೃತ ಹಾಗೂ ಧಾರ್ಮಿಕ 5
   - ಆ) ಕಲಾ, ವಿಜ್ಞಾನ ಕಾಲೇಜುಗಳು 5
   - ಇ) ಸಾಂಸ್ಕೃತಿಕ ಹಾಗೂ ತಾಂತ್ರಿಕ 4
   - ಈ) ಶಾಲೆಗಳು 8

6. ದತ್ತಿ ಸಂಸ್ಥೆಗಳು 2

7. ಉದ್ಯಾನವನ ಹಾಗೂ ಪುಷ್ಪವಾಟಿಕೆಗಳು 28 (312 ಎಕರೆ)

8. ಹಯನೋತ್ಪಾದನೆ
   - ಅ) ಜಾನುವಾರು ಸಂಖ್ಯೆ 439
   - ಆ) ಬೇಸಾಯದ ಭೂಮಿ ಎಕರೆ 150
   - ಬೀಡು ಭೂಮಿ " 110

9. ಕಾನನ ಪ್ರದೇಶ ಎಕರೆ 6610 (26.75, ಚ.ಕೀ.ಮೀ)

10. ತೀರ್ಥಗಳು 16

11. ಅಣೆಕಟ್ಟುಗಳು(ಪೂರ್ಣಗೊಂಡದ್ದು, ಕಾಮಗಾರಿಯಲ್ಲಿರುವುದು)2

12. ವಸ್ತು ಸಂಗ್ರಹಾಲಯಗಳು 2

13. ವಿಭಾಗಗಳು 58

14. ಕೆಲಸಗಾರರು (ಎಲ್ಲ ರೀತಿಯವರೂ ಸೇರಿ) 5392

15. ಮುದ್ರಣ ಶಾಲೆ 1

16. ಪ್ರಕಟನೆಗಳು
   - ಅ) ಮಾಸಪತ್ರಿಕೆ ಸಪ್ತಗಿರಿ (5 ಭಾಷೆಗಳಲ್ಲಿ)
   - ಆ) ವಾರ್ಷಿಕ ಪಂಚಾಂಗ
   - ಇ) 1979–80 ರಲ್ಲಿ ಧಾರ್ಮಿಕ ಹಾಗೂ ಎಚ್.ಡಿ.ಆರ್.ಎಸ್. ಪ್ರಕಟನೆಗಳು 65

17. ಹಿಂದೂಧರ್ಮರಕ್ಷಣ ಸಂಸ್ಥೆಯ ಶಾಖೆಗಳು 14

18. ವಿಚಾರಣಾ ಕೇಂದ್ರಗಳು 17

19. ಕಲ್ಯಾಣ ಮಂಟಪಗಳು 9

20. ಯಾತ್ರಿಕರ ಸಂಖ್ಯೆ
   - 1979–80 61, 10, 032
   - 1–4–80 ರಿಂದ 30–11–80 ವರೆಗೆ 49,73,293
   - 1980 ಡಿಸೆಂಬರ್ ತಿಂಗಳಿನಲ್ಲಿ 4,29,169

21. ಆದಾಯ (ಎಲ್ಲ ಬಾಬ್ತುಗಳಿಂದಲೂ ಸೇರಿ)
   - 1979–80 ರೂ 18, 58, 22, 047
   - 1–4–80 ರಿಂದ 30–11–80 ವರೆಗೆ ರೂ 13,76,34,848

22. 1980ರ ಡಿಸೆಂಬರ್ ತಿಂಗಳಿನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಯ ವಸೂಲಾತಿ ರೂ 99,33,207



‘ಅಯ್ಯಾ, ಅಯ್ಯಾ’ ಎಂದು ಕರೆಯುತ್ತಲಿದ್ದೇನೆ
‘ಅಯ್ಯಾ, ಅಯ್ಯಾ’ ಎಂದೊರಲುತ್ತಿದ್ದೇನೆ
‘ಓ’, ಎನ್ನಲಾಗದೇ ಅಯ್ಯಾ
ಆಗಳೂ ನಿಮ್ಮುಕ್ರವ ಕರೆಯುತ್ತಲಿದ್ದೇನೆ
ಮೌನವೇ ಕೂಡಲಸಂಗಮದೇವಾ

—ಬಸವಣ್ಣ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.